ಶ್ರೀ ಬಾಲಲೀಲಾ ಮಹಂತ ಶಿವಯೋಗೀಶ್ವರ ಗ್ರಂಥಮಾಲೆ—ನಂ. ೮

# ಭಕ್ತಿ ಗೀತೆಗಳು

ಪ್ರಕಾಶಕರು:

ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು,
ಮುರುಘಾಮಠ, ಧಾರವಾಡ.

೧೯೫೨

ಬಾಲಲೀಲಾ ಮಹಂತ ಶಿವಯೋಗೀಶ್ವರ ಗ್ರಂಥಮಾಲೆ

# ಭಕ್ತಿ ಗೀತೆಗಳು

ಪ್ರಕಾಶಕರು:
**ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು,**
ಮುರುಘಾಮಠ, ಧಾರವಾಡ.
ಸ್ಥಾಪಕರು ಮತ್ತು ಸಂಚಾಲಕರು:
ಶ್ರೀ ಮ. ನಿ. ಜ. ಮುರುಘರಾಜೇಂದ್ರ ಪ್ರಸಾದನಿಲಯ,
ಮುರುಘಾಮಠ, ಹಾವೇರಿಪೇಟೆ,
ಧಾರವಾಡ.

ಸಂಗ್ರಾಹಕರು:
**ಜಿ. ಪಿ. ಗುರುಪಾದದೇವರಮಠ,** ಬಿ. ಎ. (ಆನರ್ಸ)

ದಿನಾಂಕ ೮-೧೧-೧೯೫೧ **ಬೆಲೆ ೦-೧೨-೦**

ಪ್ರಕಾಶಕರು:
ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು,
ಶ್ರೀ ಮುರುಘಾಮಠ, ಹಾವೇರಿಪೇಟೆ,
ಧಾರವಾಡ.



ಪ್ರಥಮ ಮುದ್ರಣ ೧೯೩೦.
ದ್ವಿತೀಯ ಮುದ್ರಣ ೧೯೫೮.

ಮುದ್ರಕರು:
ಶ್ರೀ. ಎಂ. ಜಿ. ವಿರೂಪಾಕ್ಷನ್,
ವ್ಯವಸ್ಥಾಪಕರು:
ಮೃತ್ಯುಂಜಯ ಮುದ್ರಕರು, (ಮುದ್ರಣಾಲಯ) ಕಿಲ್ಲೆ,
ಧಾರವಾಡ.

ಶ್ರೀ ಮ. ನಿ. ಪ್ರ. ಮುರುಘೇಂದ್ರ ಮಹಾ ಶಿವಯೋಗಿಗಳು



ಗಚ್ಚಿನಮಠ, ಅಥಣಿ.

# — ಅ ರ್ಪ ಣೆ —

* * *

ಶ್ರೀ ಬಸವಾದಿ ಪ್ರಮಥರಂತೆ ನುಡಿದು, ನುಡಿದಂತೆ ನಡೆದ
ವೀರಶೈವ ಧರ್ಮಾಚರಣೆಯನ್ನು ತಮ್ಮ ಜೀವಿತದಲ್ಲಿ
ನಡೆ – ನುಡಿಗಳ ಮೂಲಕ ಆಚರಿಸಿ
ಶಿವಯೋಗದ ಘನತೆಯನ್ನು ಬೀರಿದ
ಮಹಾ ತಪಸ್ವಿಗಳೂ
ವೈರಾಗ್ಯ ಮೂರ್ತಿಗಳೂ ಕಾರಣ ಪುರುಷರೂ ಆದ
ಅಥಣಿ ಗಚ್ಚಿನ ಮಠದ
ಲಿಂಗೈಕ್ಯ

**ಶ್ರೀ. ಮ. ನಿ. ಪ್ರ.**
**ಮುರುಘೇಂದ್ರ ಮಹಾ ಶಿವಯೋಗಿಗಳ**
**ಸ್ಮಾರಕವಾಗಿ**

ಅವರ ಅಡಿದಾವರೆಗಳಿಗೆ ಈ ಗ್ರಂಥವನ್ನು
ಭಕ್ತಿಯ ಮುಡಿಪೆಂದು
**ಅರ್ಪಿಸಲಾಗಿದೆ.**

* * *

# ಶ್ರೀ ಬಾಲಲೀಲಾ ಮಹಂತ ಶಿವಯೋಗೀಶ್ವರ ಗ್ರಂಥಮಾಲೆ



— ಅಚ್ಚಿನಲ್ಲಿರುವ ಗ್ರಂಥಗಳು —

೧ ರಾಘವಾಂಕ ಚರಿತೆ
ಸಂಪಾದಕರು : ಸ. ಸ. ಮಾಳವಾಡ, ಎ. ಎ.

೨ ಲಿಂಗಲೀಲಾ ವಿಲಾಸ ಚಾರಿತ್ರ

೩ ಪ್ರೌಢದೇವರಾಯನ ಕಾವ್ಯ
ಸಂಪಾದಕರು : ಸಂ. ಶಿ. ಭೂಸನೂರಮಠ, ಎಂ. ಎ.

# ಮುನ್ನುಡಿ

ಇಂದಿನ ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ನಡೆದ ಚಟುವಟಿಕೆಗಳನ್ನು ಚನ್ನಾಗಿ ಪರಿಶೀಲಿಸಿ ನೋಡಿದರೆ ಕನ್ನಡ ಸಾಹಿತ್ಯಕ್ಕೆ ಅತ್ಯುಜ್ವಲವಾದ ಭವಿಷ್ಯವು ಕಾಯ್ದು ಕುಳಿತಿರುವದೆಂದು ಕಂಡು ಬರುತ್ತದೆ. ಸುಮಾರು ಮೂರು ಶತಮಾನಗಳ ಪೂರ್ವದಲ್ಲಿಯೇ ನಂಜೇಶನೆಂಬ ಮಹಾನುಭಾವಿಯು ತನ್ನ ಕಾಲಜ್ಞಾನ ವಚನದಲ್ಲಿ:

ಕನ್ನಡದ ನುಡಿಯೊಮ್ಮೆ ಕನ್ನಡಿಯ ತೆರದಿಂದೆ
ಚನ್ನಾಗಿ ಬೆಳೆದು ಬೆಳಗುವದು ಜಗದೊಳಗೆ
ಮುನ್ನುಡಿಯು ಎಂದು ನಂಜೇಶ.

ಎಂದು ಹೇಳಿರುವದನ್ನು ಕಂಡಾಗ ನಮ್ಮ ಮಾತಿಗೆ ಪುಷ್ಟಿ ಕಸುವು ಬಂದು ಬಿಡುವದು. ಕನ್ನಡ ಸಾಹಿತ್ಯವು ಕನ್ನಡಿಗರ ಸೋಜ್ವಲ ಜೀವನದ ಪ್ರತೀಕವಾಗಿದೆ. ಕನ್ನಡ ಕವಿಗಳು ತಮ್ಮ ಹೃದಯಮಂದಿರದ ಗರ್ಭಗುಡಿಯಲ್ಲಿ ಬೆಳಗುವ ಜ್ಞಾನಜ್ಯೋತಿಯನ್ನೇ ಲೋಕಕಲ್ಯಾಣದ ದೃಷ್ಟಿಯಿಂದ ಭಾಷೆಯ ರೂಪದಲ್ಲಿ ವ್ಯಕ್ತಪಡಿಸಿದುದೆ ಕನ್ನಡ ಸಾಹಿತ್ಯವೆನಿಸಿರುವದು. ಕನ್ನಡಿಗರ ಭಾಗ್ಯವು ಕನ್ನಡ ಸಾಹಿತ್ಯದಲ್ಲಿ ಹುದುಗಿಕೊಂಡಿರುವದು.

ಕನ್ನಡ ಸಾಹಿತ್ಯಜ್ಯೋತಿ ಗಂಗೆಯು ಯಾವಾಗ ಉದಯವಾಯ್ತೆಂಬದನ್ನು ನಿರ್ಣಯಿಸಿ ಹೇಳಲು ಇದುವರೆಗೆ ಯಾವ ಸಾಹಿತಿಗೂ ಸಾಧ್ಯವಾಗಿಲ್ಲ. ಆದರೆ ಅದು ಬಹು ದೂರದಿಂದ ಹರಿದು ಬಂದಿರುವದೆಂಬುವಲ್ಲಿ ಸಂದೇಹವೇನಿಲ್ಲ. ಇಷ್ಟರಲ್ಲಿಯೇ ಒಂಬತ್ತನೇ ಶತಮಾನದಲ್ಲಿ ನೃಪತುಂಗನ ಕವಿರಾಜಮಾರ್ಗವೆಂಬ ಗ್ರಂಥಕ್ಕಿಂತ ಮೊದಲಿನ ಯಾವ ಸಾಹಿತ್ಯಗ್ರಂಥವೂ ಉಪಲಬ್ಧವಿಲ್ಲ. ಆದರೆ ಕ್ರಿ. ಶ. ೪೫೦ರ ಹಲ್ಮಿಡಿ ಶಿಲಾಶಾಸನದಲ್ಲಿ ಕನ್ನಡ ಸಾಹಿತ್ಯ ವಾಹಿನಿಯ ಪಾವನ ವಿಚಾರೋದಕದ ದರ್ಶನವನ್ನು ಕನ್ನಡ ಸಾಹಿತ್ಯ ಸಂಶೋಧಕರು ಮಾಡಿಕೊಂಡಿರುತ್ತಾರೆ. ಇನ್ನು ಕೆಲವರು ಕ್ರಿ. ಶ. ಪೂರ್ವದಲ್ಲಿಯೇ ಕನ್ನಡ ಸಾಹಿತ್ಯವು ಪ್ರಸಿದ್ಧವಾಗಿದ್ದಿತೆಂದು ಹೇಳುತ್ತಾರೆ. ಕ್ರಿ. ಶ. ೨ನೇ ಶತಮಾನದಲ್ಲಿ ರಚಿತವಾದ ಒಂದು ಗ್ರೀಕ ನಾಟಕದಲ್ಲಿ ಕೆಲವು ಕನ್ನಡ ಶಬ್ದಗಳು ಇರುವವೆಂದು ಡಾ. ಹುಲ್ಷ್ ಎಂಬ ಪಂಡಿತರು ಹೇಳಿರುವದನ್ನು ಕವಿಚರಿತ್ರಕಾರರಾದ ಆರ್. ನರಸಿಂಹಾಚಾರ್ಯರು ಎತ್ತಿ ಹೇಳಿದ್ದಾರೆ. ಒಟ್ಟಿನಲ್ಲಿ ಹೇಳುವದಾದರೆ ಕನ್ನಡ ಸಾಹಿತ್ಯವು ಬಹು ಪುರಾತನ

ವಾದದ್ದೆಂಬುವಲ್ಲಿ ಯಾರ ಮತಭೇದವಿಲ್ಲ. ನೆರೆಹೊರೆಯ ಭಾಷೆಗಳು ಇನ್ನೂ ಕಣ್ದೆರೆಯದಿರುವಾಗಲೇ ಕನ್ನಡವು ಹುಟ್ಟಿ ಬೆಳೆದು ಬೆಳಗುತ್ತಿದ್ದಿತು! ಇದು ಕನ್ನಡಿಗರಿಗೆ ಹೆಮ್ಮೆಯ ಮಾತಾಗಿರುವದು ಸಹಜವೆ!

ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ನಿಂತು ಕೃಷಿ ಮಾಡಿದವರಲ್ಲಿ ಜೈನ ಕವಿಗಳು ತಮ್ಮ ಧರ್ಮ ಪ್ರಚಾರ ಮಾಡುವ ಧ್ಯೇಯವನ್ನಿಟ್ಟುಕೊಂಡು ಕನ್ನಡದಲ್ಲಿ ಗ್ರಂಥರಚನೆ ಮಾಡಲು ತೊಡಗಿದರು. ಅವರ ಗ್ರಂಥಗಳೆಲ್ಲಾ ಹೆಚ್ಚಾಗಿ ಚಂಪೂ ರೂಪದಲ್ಲಿರುತ್ತವೆ. ಪಂಪ, ರನ್ನ ಜನ್ನ, ನಾಗಚಂದ್ರ ಮುಂತಾದ ಜೈನ ಕವಿಗಳು ತಮ್ಮ ಗ್ರಂಥಗಳಲ್ಲಿ ಸಂಸ್ಕೃತ ಶಬ್ದಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಆಗ ಸಂಸ್ಕೃತಭಾಷೆಯ ಪ್ರಭುತ್ವವು ಅಧಿಕವಾಗಿದ್ದುದೇ ಇದಕ್ಕೆ ಮೂಲ ಕಾರಣವಾಗಿರುವದು. ೧೨ನೇ ಶತಮಾನದ ವರೆಗೂ ಜೈನ ಕವಿಗಳು ಬರೆದ ಗ್ರಂಥಗಳೇ ವಿಶೇಷವಾಗಿ ದೊರೆಯುತ್ತವೆ.

೧೨ನೇ ಶತಮಾನ ಪ್ರಾಪ್ತವಾಗುತ್ತಲೇ ಕನ್ನಡ ನಾಡಿನಲ್ಲಿ ಭಾಗ್ಯರವಿಯು ಉದಯನಾದನು. ಆಗ ಕನ್ನಡ ಸಾಹಿತ್ಯದಲ್ಲಿ ಅಭೂತಪೂರ್ವವಾದ ಕ್ರಾಂತಿಯುಂಟಾಯಿತು. ಆ ಕ್ರಾಂತಿಗೆ ಕನ್ನಡ ಕುಲಋಷಿಗಳಾದ ಶರಣ ಶರಣೆಯರೇ ಮುಂದಾದರು. ಅವರಲ್ಲಿ ಬಸವ, ಚನ್ನಬಸವ, ಪ್ರಭು, ಸಿದ್ಧರಾಮ, ಅಕ್ಕಮಹಾದೇವಿಯವರು ಅಗ್ರೇಸರರು. ಅವರು ನಾಡಿನ ತುಂಬ ತಮ್ಮ ವಿಚಾರದ ಕಿಡಿಗಳನ್ನು ಜಾಗ್ರತೆಮಾಡಲು ಹೋರಾಡಿದರು. ಮತ್ತು ಕನ್ನಡ ಸಾಹಿತ್ಯದೇವಿಯ ಮೈ ಮೇಲೆ ಅನೈಸರ್ಗಿಕವಾಗಿ ತೊಡಿಸಿದ್ದ ಸಂಸ್ಕೃತ ಶಬ್ದಾಡಂಬರದ ತೊಡಿಗೆಗಳನ್ನು ಕಿತ್ತುಹಾಕಿ ಆಕೆಯ ಸಹಜ ಸೌಂದರ್ಯವನ್ನು ನೋಡಿ ಕನ್ನಡಿಗರು ನಲಿಯುವಂತೆ ಮಾಡಿದರು. ಅಲ್ಲಿಂದ ಮೊದಲು ಮಾಡಿಕೊಂಡು ಲಿಂಗವಂತ ಕವಿಗಳಲ್ಲಿ ಕೆಲವರು ಗದ್ಯದಲ್ಲಿಯೂ ಕೆಲವರು ಪದ್ಯದಲ್ಲಿಯೂ ಸಾಹಿತ್ಯರಚನೆ ಮಾಡಹತ್ತಿದರು. ಮತ್ತೆ ಕೆಲವರು ಸಾಹಿತ್ಯದಲ್ಲಿ ಸಂಗೀತವನ್ನು ಬೆರೆಸಿ ಜನರ ಮನಸ್ಸನ್ನು ಸರಿಯಾಗಿ ಅರಳಿಸಿ ಅವರಿಗೆ ಅನುಭವದ ರಸದೂಟ ಮಾಡುವ ಅರ್ಹತೆಯನ್ನುಂಟುಮಾಡಿದರು. ಅಂಥ ಸರಸ ಕವಿಯೋಗಿಗಳಲ್ಲಿ ನಿಜಗುಣ ಶಿವಯೋಗಿಗಳು, ಮುಪ್ಪಿನ ಷಡಕ್ಷರಿಗಳು, ಸರ್ಪಭೂಷಣ ಶಿವಯೋಗಿಗಳು, ಬಾಲಲೀಲಾ ಮಹಂತ ಶಿವಯೋಗಿಗಳು, ಘನಮಠದ ನಾಗಭೂಷಣ ಶಿವ

ಯೋಗಿಗಳು ಮುಂತಾದವರು ಬರುತ್ತಾರೆ. ಅವರ ಗ್ರಂಥಗಳು ಕನ್ನಡ ಸಾಹಿತ್ಯೋದ್ಯಾನದಲ್ಲಿ ತತ್ವಗಂಧವನ್ನು ಬೀರುವ ಅಮೋಘ ಪುಷ್ಪಗಳಾಗಿರುವವು. ಅಂಥ ಗ್ರಂಥ ಪುಷ್ಪದೊಳಗಿನ ತನಿರಸವನ್ನು ಮನದಣಿಯೆ ಸವಿಯುವ ಭಾಗ್ಯವನ್ನು ಪಡೆದ ಕನ್ನಡಿಗರು ಧನ್ಯರೇ ಸರಿ.

ಇಂದಿನ ಪರಿಸ್ಥಿತಿಯಲ್ಲಿ ಅನುಭಾವಿಗಳ ಸಮಗ್ರ ಗ್ರಂಥಗಳನ್ನು ಓದುವದು ಬಹುಜನ ಕನ್ನಡ ಬಾಂಧವರಿಗೆ ಸಾಧ್ಯವಿಲ್ಲ. ಅವರಿಗಾಗಿ ಕೆಲವು ಮಹತ್ವದ ಪದ್ಯಗಳನ್ನು ಸಂಗ್ರಹಿಸಿ ಗ್ರಂಥ ರೂಪದಲ್ಲಿ ಹೊರಡಿಸುವದು ಅತ್ಯವಶ್ಯವಾಗಿದ್ದಿತು. ಈ ಕೆಲಸವನ್ನು ಧಾರವಾಡದ ಮುರಘಾಮಠ ಪ್ರಸಾದ ನಿಲಯದ ವಿದ್ಯಾರ್ಥಿಗಳಾದ ಶ್ರೀ ಗುರುಪಾದಯ್ಯ ಗುರುಪಾದದೇವರ ಮಠ, ಬಿ. ಎ. (ಆನರ್ಸ) ಅವರು ಪೂರೈಸಲು ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳ ಆಜ್ಞಾನುಸಾರ ಮುಂದೆ ಬಂದುದು ಪರಮ ಸಂತೋಷದ ವಿಷಯ. ಇವರು ಹಿಂದಿನ ಅನುಭಾವಿಗಳ ಕೆಲವು ಉತ್ತಮೋತ್ತಮ ಪದ್ಯಗಳನ್ನು ಮತ್ತು ಆಧುನಿಕ ಕವಿಗಳ ಹಾಡುಗಳನ್ನು ಸಂಗ್ರಹಿಸುವಲ್ಲಿ ಮಧುಕರ ವೃತ್ತಿಯನ್ನು ತಾಳಿರುವರು. ಮಧುಕರ (ಜೇನ್ನೊಣ)ವು ಬೇರೆ ಬೇರೆ ಪುಷ್ಪಗಳಲ್ಲಿಯ ರಸವನ್ನು ಹೀರಿಕೊಂಡು ಮಧುರವಾದ ಮಧುವನ್ನು ಸಿದ್ಧಪಡಿಸಿದಂತಾಗಿದೆ ಇವರ ಭಕ್ತಿಗೀತೆಗಳ ಸಂಗ್ರಹ ಗ್ರಂಥದಲ್ಲಿಯ ಕೆಲವು ಪದ್ಯಗಳನ್ನು ಮಾದರಿಗಾಗಿ ವಾಚಕರೆದುರು ಇಡಬಯಸುತ್ತೇನೆ.

ಜಗತ್ತಿನ ಭೋಗ ಸುಖವು ಉಪೇಕ್ಷಣೀಯವಲ್ಲದಿದ್ದರೂ ಶಿವನನ್ನು ಮರೆತು ನಡಿಸುವ ಭೋಗವು ದುಃಖದ ಬೀಜವೆಂಬದನ್ನು ತಿಳಿದುಕೊಂಡ ಮುಪ್ಪಿನ ಷಡಕ್ಷರ ಯೋಗಿಗಳು 'ಧರೆಯ ಸುಖದ ಭೋಗವೆನಗೆ ಹರಿದು ಹೋಗಲಯ್ಯ ನಿಮ್ಮ ಚರಣ ಕಮಲದಲ್ಲಿ ಮನವು ಮಗ್ನವಾಗಲಿ' ಎಂಬ ಪದ್ಯದಲ್ಲಿ ಒಳ್ಳೇ ಸ್ವಾರಸ್ಯವಾಗಿ ಹೇಳಿದ್ದಾರೆ. ಇದರಂತೆ ನಿಜಗುಣ ಶಿವಯೋಗಿಗಳ 'ಶ್ರೀಗುರುವಚನುಪದೇಶವನಾಲಿಸಿದಾಗಲಹುದು ನರರಿಗೆ ಮುಕುತಿ" 'ಶ್ರೀಗುರು ವಚನದಿಂದಧಿಕ ಸುಧೆಯುಂಟೇ ರಾಗದಿಂ ಬೇರಿನ್ನು ಭವ ಬೀಜಮುಂಟೆ' ಮುಂತಾದ ಪದ್ಯಗಳು ಮಾನವರ ಶ್ರೇಯೋಮಾರ್ಗ ಪ್ರದರ್ಶಕವಾಗಿರುವವು. ಹಿಂದಿನ ಅನಂತ ಜನ್ಮಗಳ ಸಂಸ್ಕಾರ ಬಲದಿಂದ ಅಸ್ಥಿರವಾದ ಸಂಸಾರದತ್ತ ಚಲಿಸುವ ಮನಸ್ಸಿಗೆ ಬಾಲಲೀಲಾ ಮಹಂತ

ಶಿವಯೋಗಿಗಳು 'ಎಲೇ ಮನವೆ ಕೇಳು ಸ್ಥಿರವೆಂದು ಸಂಸಾರ ಮಲದೇಹ ವನು ಮೆಚ್ಚಿ ಕೆಡಬೇಡ ಬರಿದೆ' ಎಂದು ಬೋಧಿಸಿರುವದು ಮನಸ್ಸಿನ ಕಲ್ಮಿಷವನ್ನು ಹೋಗಲಾಡಿಸಿಕೊಳ್ಳಬೇಕೆಂಬ ಸಾಧಕರಿಗೆ ಬಹಳ ಸಹಾಯಕವಾಗಿರುವದು. ಘನಮಠ ಶಿವಯೋಗಿಗಳು 'ಎಲ್ಲಿಭಕ್ತಿಯದೆಲ್ಲಿಮುಕ್ತಿಯದೋ" ಎಂಬ ಪದ್ಯದಲ್ಲಿ ನಿಜವಾದ ಭಕ್ತಿಯ ಸ್ಥಿತಿಯನ್ನು ಮತ್ತು ಸರ್ಪಭೂಷಣ ಶಿವಯೋಗಿಗಳ 'ಕಾಯ ಕಾಂತಾರವ ಹೊಕ್ಕು ಬೇಟೆಯನಾಡಿರೊ' ಎಂಬ ಪದ್ಯದಲ್ಲಿ ನಿಜವಾದ ಬೇಟೆಯನ್ನು ಮನಂಬುಗುವಂತೆ ಬೋಧಿಸಿದ್ದಾರೆ. ಇನ್ನು ಅನೇಕ ಆಧುನಿಕ ಕವಿಗಳ ಸರಸ ವಚನಗಳು ಇದರಲ್ಲಿ ಸಂಗ್ರಹವಾಗಿದ್ದು ವಾಚಕರು ಇವೆಲ್ಲವುಗಳ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳುವದು ಒಳ್ಳೇದು.

ನಮ್ಮ ಕನ್ನಡ ನಾಡು ಒಂದು ದಿವ್ಯ ಭೂಮಿಯಾಗಿರುವದು. ಇದರ ಪ್ರತಿಯೊಂದು ಧೂಳಿ ಕಣಗಳಲ್ಲಿ ದೈವೀಶಕ್ತಿಯು ತುಂಬಿಕೊಂಡಿರುತ್ತದೆ. ಹಿಂದೆ ಅನಂತ ಮಹಾನುಭಾವಿಗಳು ಇಲ್ಲಿ ತಮ್ಮ ಲೀಲೆಯನ್ನು ಮಾಡಿ ಹೋಗಿರುವದೇ ಇದಕ್ಕೆ ಮೂಲವಾಗಿದೆ. ಈಗ ನಮ್ಮ ನಾಡು ಎಷ್ಟು ಹಿಂದುಳಿದಿದೆಂದು ಹೇಳಿದರೂ ಮಹಾನುಭಾವಿಗಳ ಕೃಪೆಯಿಂದ ಇದರಲ್ಲಿ ಸಂಸ್ಕೃತಿ ಜಾಗೃತವಾಗಿದ್ದು ಅಶಾಂತಿಯಿಂದ ತಪ್ತವಾದ ಜಗತ್ತಿಗೆ ಜ್ಞಾನ ದಾನ ಮಾಡುವ ಬಲವನ್ನು ಕಾಯ್ದುಕೊಂಡಿರುವದು ಕನ್ನಡಿಗರಿಗೆ ಹೆಮ್ಮೆಯ ವಿಷಯುವಲ್ಲವೇ ? ವಿಶ್ವದ ಸಮಸ್ತ ವಿದ್ವಾಂಸರು ಆಧ್ಯಾತ್ಮಿಕ ಜ್ಞಾನಕ್ಕಾಗಿ ಭಾರತಕ್ಕೆ ಮೊರೆ ಹೋಗಬೇಕಾಗಿರುವಾಗ, ಅದರಲ್ಲಿ ಕನ್ನಡ ನಾಡಿನ ಅನುಭಾವವು ಭಾರತೀಯ ತತ್ವಜ್ಞಾನಕ್ಕೆ ಸಲ್ಲಿಸಿದ ಕಾಣಿಕೆಯನ್ನು ನೆನೆದುಕೊಂಡರೆ, ಕನ್ನಡ ನಾಡಿನ ಅನುಭಾವಿಗಳ ಗೌರವನೆಷ್ಟಿದೆ ಎಂಬದು ಸ್ಪಷ್ಟವಾಗುತ್ತದೆ. ಅಂಥ ಕಾಲವು ಇನ್ನು ಬಹಳ ದೂರವಿಲ್ಲ. ಕನ್ನಡಿಗರೆಲ್ಲರೂ ಒಮ್ಮನಸ್ಸಿನಿಂದ ಕೂಡಿಕೊಂಡು ತತ್ವ ಸೇವೆಗೆ ಮುಂದೆ ಬರಬೇಕು. ಆದಕ್ಕಾಗಿ ಇಂಥ ಅನೇಕ ಸಂಗ್ರಹ ಪುಸ್ತಕಗಳು, ಕನ್ನಡಿಗರ ಹಸ್ತಗತವಾಗಬೇಕು.

ಗದಗ
ಅಖಿಲಭಾರತ ವೀ. ವಿದ್ಯಾಪೀಠ

**ನಾಗಭೂಷಣ ಶಾಸ್ತ್ರಿ**
ಸಂಪಾದಕ, 'ಸಾವಧಾನ'

# ಪ್ರಸ್ತಾವನೆ

-**-

ಈ ಹಿಂದೆ ನನಗೆ ಒಳ್ಳೇ ಪದ್ಯಗಳನ್ನು ಕಂಡರೆ ಬರೆದುಕೊಂಡು ಅವುಗಳನ್ನು ಅನ್ನುವ ಅಭ್ಯಾಸವಿತ್ತು. ಹೀಗಿ ಎಲ್ಲ ಕೈವಲ್ಯಕಾರರ ೧೫೦ ಪದ್ಯಗಳು ನನ್ನಲ್ಲಿ ಸಂಗ್ರಹವಾದವು. ಅವುಗಳನ್ನು ಒಂದು ಅಚ್ಚುಕಟ್ಟಾದ ಪುಸ್ತಕ ಸ್ವರೂಪಕ್ಕೆ ತರಲು ನನ್ನ ಪೂಜ್ಯ ಗುರುಗಳಾದ ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳವರು ಸಲಹೆಯಿತ್ತು ನನ್ನನ್ನು ಹಾಗೆ ಮಾಡಲು ಪ್ರೇರೇಪಿಸಿದರು. ಅವರ ಕೃಪೆಯಿಂದಲೇ ಈ ಪುಸ್ತಕ ಓದುಗರ ಕೈಸೇರಿದ್ದರಿಂದ ತುಂಬ ಸಂತೋಷವೆನಿಸುವದು. ಇನ್ನು ಈ ಪುಸ್ತಕದ ವೈಶಿಷ್ಟ್ಯವನ್ನು ಕುರಿತು ಕೆಲವು ಮಾತು ತಿಳಿಸಿಕೊಡಲು ಪ್ರಯತ್ನಿಸುತ್ತೇನೆ.

ಕನ್ನಡ ಸಾಹಿತ್ಯದಲ್ಲಿ ವೀರಶೈವ ಸಾಹಿತ್ಯವು ಹೇಗೆ ಒಂದು ವಿಶಿಷ್ಟತೆಯನ್ನು ಪಡೆದಿದೆಯೋ ಹಾಗೆ ವೀರಶೈವ ಸಾಹಿತ್ಯದಲ್ಲಿ ಕೈವಲ್ಯ ಸಾಹಿತ್ಯವು ಒಂದು ಸ್ಥಾನ ಪಡೆದಿದೆ. ಬಸವಾದಿ ಪ್ರಮಥರ ವಚನಗಳ ತಿರುಳನ್ನೇ ಹೇಳುತ್ತಿರುವದರಿಂದ ಈ ಸಾಹಿತ್ಯಕ್ಕೆ ವಚನ ಸಾಹಿತ್ಯವೇ ಅಡಿಗಲ್ಲು. ಈ ಅನುಭವದ ಹಾಡುಗಳು ವೀರಶೈವ ತತ್ವವನ್ನೂ, ವಿಶಾಲದೃಷ್ಟಿ, ನೀತಿ ಮತ್ತವನ್ನೂ ಮತ್ತು ವಿಶ್ವಧರ್ಮಕ್ಕೇ ಬೇಕಾಗುವ ತತ್ವಗಳನ್ನೂ ಬೋಧಿಸುತ್ತವೆ. ಆದುದರಿಂದ ಕೈವಲ್ಯಕಾರರು ಜಗತ್ಪೂಜ್ಯರು. ಅವರ ಗೀತೆಗಳು ಜಗದ್ಬೋಧಕವಾದವುಗಳು. ಜಗತ್ತಿನಲ್ಲಿ ಸಾಹಿತ್ಯ ಸೃಷ್ಟಿಕರ್ತೃಗಳು ಅನೇಕರು ಸಿಗಬಹುದು, ಆದರೆ ನುಡಿದಂತೆ ನಡೆದು ನಡೆದ ಮಾರ್ಗವನ್ನು ಸಾಹಿತ್ಯರೂಪದಿಂದ ಉಣ್ಣಿಸಿದವರಲ್ಲಿ ವಚನಕಾರರು, ಕೈವಲ್ಯಕಾರರು ಅಗ್ರಗಣ್ಯರು. "ಯೋಗಿ ನಿಜಾನಂದದೊಳು ನುಡಿಸುವ ವೀಣೆ ರಾಗ ರಸದ ತರಂಗಿಣಿ" ಎಂಬ ನಿಜಗುಣ ಶಿವಯೋಗಿಗಳ ನುಡಿಯು ಇಲ್ಲಿಯ ಗೀತೆಗಳಿಗೆ ಸಹಜವಾಗಿ ಅನ್ವಯಿಸುತ್ತದೆ. ಆದುದರಿಂದ ಇಂಥ ಅನುಭಾವಿಗಳ ಜೀವನ ಸಂಗೀತ ಅಭ್ಯಾಸ ಮಾಡುವದು ನಮ್ಮೆಲ್ಲರ ಕರ್ತವ್ಯವಾಗಿದೆ. ವೀರಶೈವ ಧರ್ಮದಲ್ಲಿ ಬಸವಾದಿ ಪ್ರಮಥರಿಂದಲೂ ಭಕ್ತಿಗೇ ಮಹತ್ವ ಕೊಟ್ಟದ್ದರಿಂದ ಈ ಕೈವಲ್ಯಕಾರರಾದರೂ ಆ ಹಾದಿಯನ್ನೇ ಅನುಸರಿಸಿ ತಮ್ಮ ಗೀತೆಗಳಲ್ಲಿಯೂ ಭಕ್ತಿಗೇ ಪ್ರಾಮುಖ್ಯತೆ ಕೊಟ್ಟಿದ್ದರಿಂದ ಈ ಪುಸ್ತಕಕ್ಕೆ 'ಭಕ್ತಿ ಗೀತೆಗಳು' ಎಂದು ಹೆಸರಿಡಲಾಗಿದೆ.

ಈ ಭಕ್ತಿಗೀತೆಯ ಮೊದಲಿನ ೧೬ ಪದ್ಯಗಳು ಎಲ್ಲ ಕೈವಲ್ಯಕಾರರ ವಿದ್ದು ಅವು ಇಲ್ಲಿಯ ಪ್ರಸಾದನಿಲಯದ ವಿದ್ಯಾರ್ಥಿಗಳು ನಿತ್ಯವೂ ಪಠಿಸುವ ಗೀತೆಗಳು. ಮುಂದೆ ಕ್ರಮವಾಗಿ (೧) ಸರ್ಪಭೂಷಣ ಶಿವಯೋಗಿಗಳು (೨) ಘನಮಠ ಶಿವಯೋಗಿಗಳು (೩) ನಿಜಗುಣ ಶಿವಯೋಗಿಗಳು (೪) ಮುಪ್ಪಿನ ಷಡಕ್ಷರಿ ಸ್ವಾಮಿಗಳು (೫) ಬಾಲಲೀಲಾ ಮಹಂತ ಶಿವಯೋಗಿಗಳು (೬) ಬಸವಲಿಂಗ ಶರಣರು (೭) ಆಧುನಿಕ ಕವಿಗಳು. ಹೀಗೆ ಇವರ ಕೆಲಕೆಲವು ಹಾಡುಗಳನ್ನು ಆಯ್ದುಕೊಂಡಿದ್ದೇನೆ. ಜನರು ಇವರು ಬರೆದ ಒಂದೊಂದು ಮೂಲ ಪ್ರತಿಗಳನ್ನು ಕೊಂಡು ಓದುವದು ಅಸಾಧ್ಯ. ಯಾಕಂದರೆ ಅವು ಅಚ್ಚುಕಟ್ಟಾಗಿ ಮುದ್ರಿಸಲ್ಪಟ್ಟಿಲ್ಲ, ಕೆಲವು ಪ್ರತಿಗಳು ಸಿಗುವದಿಲ್ಲ; ಸಿಕ್ಕವುಗಳನ್ನು ಹೆಚ್ಚು ಬೆಲೆಯನ್ನುಕೊಟ್ಟುಕೊಂಡು ದೀರ್ಘವಾದವುಗಳನ್ನು ಓದುವದಾಗುವದಿಲ್ಲ. ಕಾರಣ ಈ ತೊಂದರೆ ನಿವಾರಣೆ ಮಾಡಲು ಈ ಪುಸ್ತಕವು ಸಹಾಯ ಮಾಡದೆ ಇರದು. ತೋಟದಲ್ಲಿಯ ಅನೇಕ ಗಿಡಗಳಲ್ಲಿಯ ಸುಗಂಧವಾದ ಮಧುರವಾದ ಹೂಗಳನ್ನಷ್ಟೇ ಮಾತ್ರ ಒಂದುಗೂಡಿಸಿದಂತೆ ಈ ಗೀತೆಗಳನ್ನು ಒತ್ತಟ್ಟಿಗೆ ಕೂಡಿಸಿ ಮಾಲೆಯನ್ನಾಗಿ ಮಾಡಲು ಸಾಧ್ಯವಾದಷ್ಟು ಪ್ರಯತ್ನಿಸಿದ್ದೇನೆ.

ಇನ್ನು ಈ ಅನುಭಾವಿಗಳ ಮತ್ತು ಅವರ ಹಾಡುಗಳ ಅಲ್ಪ ಪರಿಚಯ ಮಾಡಿ ಕೊಡುವದು ಅವಶ್ಯವೆನಿಸಿದ್ದರಿಂದ ಕೆಳಗೆ ಕೊಟ್ಟಿದ್ದೇನೆ.

(೧) ಸರ್ಪಭೂಷಣ ಶಿವಯೋಗಿಗಳು:— ಇವರು ಕ್ರಿ. ಶ. ೧೭೯೫ ರಲ್ಲಿ ಬೆಂಗಳೂರಲ್ಲಿ ಜನಿಸಿದರು. ಮುಂದೆ ಅವರ ತಂದೆ ತಾಯಿಗಳು ಅಲ್ಲಿಯ ಗುರುಸಿದ್ಧ ಸ್ವಾಮಿಗಳಲ್ಲಿ ವಿಧ್ಯಾಭ್ಯಾಸಕ್ಕಾಗಿ ಇಟ್ಟರು. ಗುರುಗಳಿಂದ ವಿದ್ಯಾಭ್ಯಾಸ ಸಂಪಾದಿಸಿ, ವಿರಕ್ತಾಶ್ರಮಹೊಂದಿ ಅವರ ಅಪ್ಪಣೆಯ ಮೇರೆಗೆ ೧೮೧೫ರಲ್ಲಿ ದೇಶಾಟನೆಗೆ ಹೊರಟರು. ಆ ಮೇಲೆ ಅಖಂಡ ಕರ್ನಾಟಕವನ್ನೇ ಸಂಚರಿಸಿ ಭಕ್ತರನ್ನು ಉದ್ಧರಿಸುತ್ತ ೧೮೨೮ರಲ್ಲಿ ಮರಳಿ ಬೆಂಗಳೂರಿಗೆ ಬಂದು ಗುರುಗಳ ದರ್ಶನಕ್ಕೆ ಪಾತ್ರರಾದರು. ಗುರುಗಳು ಲಿಂಗೈಕ್ಯರಾದನಂತರ ಅವರ ಮಠಕ್ಕೆ ಅಧಿಕಾರಿಗಳಾದರು. ಇವರು ರಚಿಸಿರುವ ಗ್ರಂಥಗಳೆಂದರೆ ಕೈವಲ್ಯ ಕಲ್ಪವಲ್ಲರಿ (ಇದರಿಂದಲೇ ನಾನು ಆಯ್ದುಕೊಂಡದ್ದು) ಮತ್ತು ಸಂಸ್ಕೃತದಲ್ಲಿ ಜ್ಞಾನಶತಕ. ವರಕವಿಗಳ ಮಾಲಿಕೆ

ಯಲ್ಲಿ ಇವರು ಬರುವರು. ಇವರ ಶೈಲಿ ಲಲಿತ ಮತ್ತು ರಮ್ಯವಾಗಿದೆ. ಗಹನವಾದ ವಿಷಯಗಳನ್ನು ಮನದಟ್ಟಾಗುವ ಉದಾಹರಣೆಗಳಿಂದ ಕೊಡುವ ಸಾಮರ್ಥ್ಯ ಅಗಾಧವಾಗಿದೆ. ನಿರಾಭಾರಿಗಳಾದರೂ ಲೋಕಾನುಭವವಿದೆ. ಇವರ ಗೀತೆಗಳು ಕ್ಲಿಷ್ಟತೆ ಇಲ್ಲದ್ದರಿಂದ ಕಾವ್ಯಪಾಕ ದ್ರಾಕ್ಷಾ ಪಾಕದಂತಿವೆ. ಇವರ ಗೀತೆಗಳೆಲ್ಲ ನಿಜಗುಣ ಶಿವಯೋಗಿಗಳ ಗೀತೆಗಳಿಗೆ ಹೋಲುತ್ತವೆ. ತಮ್ಮ ಗುರುಗಳಾದ "ಗುರುಸಿದ್ಧ" ಸ್ವಾಮಿಗಳ ಮುದ್ರಿಕೆಯಿಂದ ಹಾಡುಗಳನ್ನು ರಚಿಸಿದ್ದಾರೆ.

(೨) ಘನಮಠ ನಾಗಭೂಷಣ ಶಿವಯೋಗಿಗಳು:— ಇವರು ಆಂಧ್ರ ದೇಶದಲ್ಲಿ ನೈಜಾಮು ಇಲಾಖೆಯಲ್ಲಿರುವ ಅತ್ರಾಫಬ ಜಿಲ್ಲೆಯ ಪಟ್ಲೂರ ತಾಲೂಕಿಗೆ ಸೇರಿದ ದೊರ್ವಡೆಯಂಬಲ್ಲಿ ೧೮೨೮ರಲ್ಲಿ ಜನಿಸಿದರು. ಇವರ ತಂದೆ ತಾಯಿಗಳು ವೀರಯ್ಯ ವೀರಾಂಬೆಯವರು. ೭ನೇ ವರ್ಷದಲ್ಲಿ ದೀಕ್ಷೆ ಮಾಡಿದರು. ಮುಂದೆ ೮೧ನೇ ವಯಸ್ಸಿಗೆ ತಂದೆ ತಾಯಿಗಳನ್ನು ತ್ಯಜಿಸಿ ತಮ್ಮ ಶಿವತೇಜ ಶಿವಾನುಭವ ಸೂಸುವ ಮುಖವುಳ್ಳವರಾಗಿ ಬಸವ ಮಾರ್ಗವೇ ನಿಜಮುಕ್ತಿಗೆ ಹೆದ್ದಾರಿಯೆಂದು ತಿಳಿದು ಆದ್ಯರ ವಚನಗಳಲ್ಲಿ ತುಂಬಿರುವ ಅನುಭವವನ್ನು ಸವಿದು ಸಂತಾಪದಿಂದ ಬಳಲುತ್ತಿರುವ ಮಾನವರಿಗೆ ಆ ಅನುಭವಾಮೃತವನ್ನು ನೀಡಿದರು. ಚೆನ್ನಕ್ಕ ಬಸವಣ್ಣನವರ ವಚನಗಳನ್ನು ಕಟ್ಟಿಕೊಂಡು ಬಸವನ ಭಕ್ತಿ ಬೀರಲು ಭಕ್ತಿಜ್ಞಾನ ವೈರಾಗ್ಯ ಯುತರಾಗಿ ಮೋಹವನ್ನು ತೊರೆದು ಬಸವನ ಭಕ್ತಿಯನ್ನೇ ಕೊಂಡಾಡುತ್ತ 'ದೂಷಣೆ ಮಾಡಲದೊಂದೆ ಜನರತಿ ಭೂಷಣೆ ಮಾಡಲವೊಂದೆ' ಎಂಬಂತೆ ಜನರ ದೂಷಣೆ ಭೂಷಣೆ ಒಂದೇ ಎಂದು ಭಾವಿಸಿ ೨೦-೨೫ ವರ್ಷ ಅವಿಶ್ರಾಂತವಾಗಿ ಸಂಚರಿಸಿದರು. ಕಡೆಗೆ ಇಳಕಲ್ಲ ಅಮೀನಗಡ ಹುನಗುಂದದಲ್ಲಿ ವಾಸಮಾಡುತ್ತಿದ್ದು ರಾಯಚೂರ ಜಿಲ್ಲೆ ಲಿಂಗಸೂರ ತಾಲೂಕ ಸಂತೇ ಕೇಲೂರಿನಲ್ಲಿ ೧೮೮೪ರಲ್ಲಿ ಲಿಂಗೈಕ್ಯರಾದರು. ಕೃಷಿಜ್ಞಾನಪ್ರದೀಪಿಕೆ ಎಂಬ ಗ್ರಂಥವನ್ನೊಂದು ರಚಿಸಿದ್ದಾರೆ. ಇವರ ಹಾಡುಗಳಲ್ಲಿ ತತ್ವಕ್ಕಿಂತ ಭಕ್ತಿ ಹೆಚ್ಚು, ಸಂದರ್ಭ ಸನ್ನಿವೇಶಗಳಿಗನುಸರವಾಗಿ ಭಾವೋದ್ರೇಕದಿಂದ ಹೊರ ಹೊಮ್ಮಿದ ಘನಮಠರ ಹಾಡುಗಳು ಅವರ ಸುಂದರ ಜೀವನವನ್ನು ವ್ಯಕ್ತ

ಪಡಿಸುತ್ತವೆ. ಗಾಯನ ಕಲೆಯಲ್ಲಿ ಒಳ್ಳೇ ಕುಶಲರು. 'ಘನಮಠ' ಎಂಬ ಮುದ್ರಿಕೆಯಿಂದ ಹಾಡುಗಳನ್ನು ರಚಿಸಿದ್ದಾರೆ.

(೩) ನಿಜಗುಣ ಶಿವಯೋಗಿಗಳು:—ಭರತ ಖಂಡದ ವಿಭೂತಿಪುರುಷರಲ್ಲಿ ಇವರೊಬ್ಬರು. ಮೈಸೂರ ದೇಶದ ಎಲ್ಲೆಯ ಶ್ರೀ ಶಂಭುಲಿಂಗನ ಬೆಟ್ಟದ ಅಕ್ಕಪಕ್ಕದ ನಾಡುಗಳಿಗೆ ಅರಸನಾಗಿದ್ದು ಗೃಹಸ್ಥಾಶ್ರಮದಲ್ಲಿಯೇ ಸದ್ಗುಣ ಮುಖೇಣ ಜ್ಞಾನೋಪದೇಶ ಹೊಂದಿ, ವಿದ್ಯಾ ಸಂಪತ್ತು ತೇಜಸ್ವಿನಿಂದ ಕೂಡಿದ್ದರು. ಕೆಲವು ಕಾಲದ ನಂತರ ವಿರಕ್ತಾಶ್ರಮವನ್ನು ಸ್ವೀಕರಿಸಿ ಲೋಕೋದ್ಧಾರಮಾಡುವ ಇಚ್ಛೆಯಿಂದ (೧) ಅರವತ್ತುಮೂರು ಮಂದಿ ಪುರಾತನರ ಸ್ತೋತ್ರ (೨) ಕೈವಲ್ಯಪದ್ಧತಿ (ಇದರಿಂದಲೇ ನಾನು ಆಯ್ದುಕೊಂಡದ್ದು) (೩) ಪರಮಾನುಭವ ಬೋಧೆ (೪) ಪರಮಾರ್ಥಗೀತೆ (೫) ಅನುಭವಸಾರ (೬) ವಿವೇಕ ಚಿಂತಾಮಣಿ (೭) ಪಾರಮಾರ್ಥ ಪ್ರಕಾಶಿಕೆ ಎಂಬ ಕನ್ನಡ ಗ್ರಂಥಗಳನ್ನೂ, (೮) ದರ್ಶನಸಾರ (೯) ಆತ್ಮತರ್ಕ ಚಿಂತಾಮಣಿ ಎಂಬ ಸಂಸ್ಕೃತ ಗ್ರಂಥಗಳನ್ನೂ ರಚಿಸಿರುವರು. ಇವರ ಕಾಲ ಇನ್ನೂ ನಿಶ್ಚಿತವಿಲ್ಲ. ಕೆಲವರು ಮುಪ್ಪಿನಾರ್ಯರ ಸಮಕಾಲೀನರೆಂದೂ ಇವರಿಬ್ಬರ ಗವಿಗಳು ಶಂಭುಲಿಂಗನ ಬೆಟ್ಟದಲ್ಲಿ ಅಕ್ಕಪಕ್ಕದಲ್ಲಿರುವವೆಂದೂ ಇವರ ಕಾಲವನ್ನು ಸುಮಾರು ಕ್ರಿ. ಶ. ೧೫೦೦ ಎಂದು ತಿಳಿಯುತ್ತಾರೆ. ಇವರ ಗ್ರಂಥಗಳು ಪಂಡಿತ ಪಾಮರರಿಗೆ ಸ್ತ್ರೀ ಪುರುಷರಿಗೆ ಹಿತಕರವಾಗಿ ಮೃದು ಮಾಧುರ್ಯ ಸುಂದರ ಸರಳ ಶೈಲಿಯಿಂದ ಕೂಡಿದ್ದು ಮನೋಹರವಾಗಿವೆ. ಇವರ ಹಾಡುಗಳ ಮುದ್ರಿಕೆ 'ಶಂಭುಲಿಂಗ.'

(೪) ಮುಪ್ಪಿನ ಷಡಕ್ಷರಿ ಸ್ವಾಮಿಗಳು:– ಸಮಗ್ರವಾದ ಸಾದ್ಯಂತವಾದ ಜೀವನ ಚರಿತ್ರೆ ದೊರೆಯದಿದ್ದರೂ ಇವರ ಭಕ್ತಿಪರ ವೈರಾಗ್ಯ ಬೋಧಕ ಹಾಡುಗಳಲ್ಲಿ ಇವರ ನಿರ್ಮಲ ವ್ಯಕ್ತಿತ್ವವು ಸ್ಫುಟವಾಗಿ ರೂಪುಗೊಂಡಿದೆ. ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು ಹೇಳುವಂತೆ ಇವರು ನಿಜಗುಣರ ಸಮಕಾಲೀನರೆಂದೂ ಶಂಭುಲಿಂಗನ ಬೆಟ್ಟದಲ್ಲಿಯೇ ಇವರ ಗವಿ ಇದೆಯೆಂದು ಶಿವಾನುಭವದಲ್ಲಿ ಬರೆದಿದ್ದಾರೆ. ಇವರ ಮೊದಲನೇ ಹಾಡಿನಂತೆ ಯರಗಂಬಳಿಯ ಸಿದ್ಧಲಿಂಗರು ಇವರಿಗೆ ಶಿವತತ್ವಾನುಭವವನ್ನು ಅರುಹಿದ ಗುರುಗಳೆಂದು ತಿಳಿಯುತ್ತದೆ. ಇದಕ್ಕಿಂತ ಹೆಚ್ಚಿಗೆ ಸಂಗತಿ ಇವರ

ಜೀವನ ವಿಷಯಕ್ಕೆ ತಿಳಿದಿಲ್ಲ. ಆದರೆ ಇವರ ಉಜ್ವಲವಾದ ವ್ಯಕ್ತಿತ್ವವು ಇವರ ಹಾಡುಗಳಲ್ಲಿ ತುಂಬಿದೆ. ತಾದಾತ್ಮ್ಯ, ತನ್ಮಯತೆ, ಪರವಶತೆ, ಸಮರಸ ಭಾವ ವೈರಾಗ್ಯ, ಉಜ್ವಲತೆ, ಭಕ್ತಿಯ ಆವೇಶ ಇವರ ಹಾಡುಗಳ ಹೆಗ್ಗುರುತುಗಳು. ಇವರ ಜೀವನದಂತೆ ಇವರ ಶೈಲಿಯೂ ಸರಳವಿದೆ. ಇವರ ತತ್ವಗಳು ಜಗತ್ತಿಗೇ ಮಾನ್ಯವಾದವುಗಳು. ಆದ್ದರಿಂದ ಅವು ಸಮುದ್ರದಷ್ಟು ವಿಶಾಲ. ಇವರು "ಷಡಕ್ಷರಿಲಿಂಗ" ಎಂಬ ಮುದ್ರಿಕೆಯಿಂದ ಹಾಡುಗಳನ್ನು ರಚಿಸಿದ್ದಾರೆ.

(೫) ಬಾಲಲೀಲಾ ಮಹಂತ ಶಿವಯೋಗಿಗಳು:—ಇವರು ವಿಜಾಪುರ ಜಿಲ್ಲಾ ಆಲಮಟ್ಟಿಯಲ್ಲಿ ಜನಿಸಿದರು. ಆ ಮೇಲೆ ಲಿಂಗನಾಯಕನಹಳ್ಳಿ ಚನ್ನವೀರ ಸ್ವಾಮಿಗಳಲ್ಲಿ ವಿದ್ಯಾಭ್ಯಾಸ ಮುಗಿಸಿಕೊಂಡು ವಿರಾಗಿಯಾಗಿ ದೇಶವನ್ನು ಸಂಚರಿಸುತ್ತ ತಮ್ಮ ಬಾಲಲೀಲೆಯಿಂದ ಜನರನ್ನು ಮುಗ್ಧಗೊಳಿಸುತ್ತ ಗದಗ ತಾಲೂಕ ಮುಳಗುಂದ ಗ್ರಾಮದಲ್ಲಿ ನೆಲಸಿದರು. ಆಗಿನ ಕಾಲದ ಮೈಸೂರ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅವರ ಅಪೇಕ್ಷೆಯ ಮೇರೆಗೆ ದರ್ಶನವನ್ನಿತ್ತು ಅವರ ಧನಕನಕ ವಸ್ತುಗಳನ್ನು ತಿರಸ್ಕರಿಸಿ ಕುಂಬಳ ಸೊರಟೆಯನ್ನಷ್ಟೇ ಸ್ವೀಕರಿಸಿದರು. (ಈಗಲೂ ಮುಳಗುಂದ ಮಠದಲ್ಲಿದೆ) ಇವರ ಲೀಲೆ ಅದ್ಭುತವಾದವುಗಳು. ಅಂತರಾತ್ಮ ಸ್ಫುರಿಸಿದಾಗ ಹೊರ ಹೊಮ್ಮಿದ ಹಾಡುಗಳನ್ನು ನಿಂತುಕೊಂಡೇ ಮಠದ ಬೋದು ತೊಲೆಯ ಮೇಲೆ ಬರೆಯುತ್ತಿದ್ದರೆಂದು ಪ್ರತೀತಿ ಇದೆ. ತಲೆ ತುರಿಸಿ ಬರೆಯದೇ ಕೇವಲ ಸ್ಫೂರ್ತಿಯಿಂದ ಬರೆದವುಗಳು. ಇವರ ಶೈಲಿಯಲ್ಲಿ ತತ್ವವಿವೇಚನೆಯ ಗಡಚುಯಿಲ್ಲ, ಸಾಮಾನ್ಯರಿಗೂ ಓದಲರ್ಹವಿದೆ. ಇವರು ೧೮೩೩ ರಿಂದ ೧೮೯೫ರ ವರೆಗೆ ಬಾಳಿದರು. ಇವರು 'ಮಹಂತ' ಎಂಬ ಮುದ್ರಿಕೆಯನ್ನಿಟ್ಟು ಪದ್ಯಗಳನ್ನು ರಚಿಸಿರುವರು.

(೬) ಬಸವಲಿಂಗ ಶರಣರು:—ಬಳ್ಳಾರಿ ಜಿಲ್ಲಾ ಹೂವಿನ ಹಡಗಲಿ ತಾಲೂಕ ಮೈಲಾರ ಕ್ಷೇತ್ರದಲ್ಲಿ ವ್ಯಾಪಾರಸ್ಥರ ಮನೆಯಲ್ಲಿ ಹುಟ್ಟಿದರು. ಇವರು ತಮ್ಮ ಗುರುಗಳ ಹೆಸರನ್ನೇ ಹೇಳ ಹೊರಟದ್ದರಿಂದ ತಂದೆ ತಾಯಿಗಳ ಹೆಸರು ಗೊತ್ತಿಲ್ಲ. ಹೊನ್ನು ಹೆಣ್ಣು, ಮಣ್ಣು ಮಾಯೆಯನ್ನದೆ ಮನದ ಮುಂದಣ ಆಶೆಯನ್ನು ತೊರೆದು ಗುರುಲಿಂಗಜಂಗಮದಲ್ಲಿ ನಂಬುಗೆಯಿಟ್ಟು

ಮನೆಗೆ ೫ ಮೈಲಾದರೂ ಮನಕ್ಕೆ ಹತ್ತರವಿದ್ದ ಲಿಂಗನಾಯಕನ ಹಳ್ಳಿಗೆ ಬಂದು ಶ್ರೀ ಚನ್ನವೀರ ಸ್ವಾಮಿಗಳಲ್ಲಿಯೇ ಇರಹತ್ತಿದರು. ಇವರು ಗುರುಗಳ ಅನುಗ್ರಹಕ್ಕೆ ಪಾತ್ರರಾಗಿ ಅವರ ಅಂಕಿತದಲ್ಲಿಯೇ ಷಟ್‌ಸ್ಥಲ ಸಿದ್ಧಾಂತ ಗುರುಕರುಣ ತ್ರಿವಿಧಿ, ಶಿವಾನುಭವ ದರ್ಪಣ, ಲಿಂಗಪೂಜಾ ವಿಧಾನ ಎಂಬವುಗಳನ್ನು ರಚಿಸಿದ್ದಾರೆ. ಇವರ ಹಾಡುಗಳನ್ನು ಶಿವಾನುಭವ ದರ್ಪಣದಿಂದ ಆಯ್ದುಕೊಂಡಿದ್ದೇನೆ. ಇವರ ಲಿಂಗಪೂಜೆ ಕೋಣೆಯನ್ನು ಈಗಲೂ ನೋಡಬಹುದು. ಹೊರಗೆ ಗದ್ದಲ ಹಾಕಿದರೆ ಒಳಗೆ ಕೇಳುವದಿಲ್ಲ. ಇವರು ವೀರಶೈವ ಸಂಸ್ಕೃತಿಗೆ ಅಪಾರ ಸಂಪತ್ತನ್ನು ಗಳಿಸಿದರು. ಇವರ ಹಾಡುಗಳ ಮುದ್ರಿಕೆ 'ಚನ್ನವೀರೇಶ'.

(೭) ಆಧುನಿಕರು:- ಅಥಣಿ ಗಚ್ಚಿನ ಮಠದ ಮುರುಘೇಂದ್ರ ಮಹಾಶಿವಯೋಗಿಗಳ ಮೇಲಿನ ಭಕ್ತಿ ಪರವಶದ ಹಾಡುಗಳು ಈಗಿನ ಅನೇಕ ಕವಿಗಳಿಂದ ಬರೆಯಲ್ಪಟ್ಟಿವೆ. ಅವರ ಹೆಸರು ಹೇಳಲು ಮತ್ತು ಅವರ ಶೈಲಿಯನ್ನು ವಿಮರ್ಶಿಸಲು ಸ್ಥಳವಿಲ್ಲ. ಕಾರಣ ಒಟ್ಟಿನ ಮೇಲೆ ಅವರ ಪದ್ಯಗಳು ಸಾಧಾರಣ ನಿತ್ಯ ಜೀವನದ ತತ್ವಾನುಭವಗಳಿಂದ ಸರಳ ಶೈಲಿಯಿಂದ ಕೂಡಿವೆ.

ಇದಕ್ಕೂ ಹೆಚ್ಚಿನ ಕೈವಲ್ಯಕಾರರ ಚರಿತ್ರೆ ಅವರ ಹಾಡುಗಳ ವಿಮರ್ಶೆ ಬೇಕಾದಲ್ಲಿ ಅವರವರ ಮೂಲ ಪ್ರತಿಗಳಿಂದ ಓದಿ ತಿಳಿದುಕೊಳ್ಳಬೇಕು. ಕೊನೆಯದಾಗಿ ಮುನ್ನುಡಿ ಬರೆದುಕೊಟ್ಟ ಪಂಡಿತ ನಾಗಭೂಷಣ ಶಾಸ್ತ್ರಿಗಳಿಗೂ ಮತ್ತು ಅಂದವಾಗಿ ಮುದ್ರಿಸಿಕೊಟ್ಟ ಮೃತ್ಯುಂಜಯ ಮುದ್ರಕರ ಒಡೆಯರಿಗೂ ತುಂಬ ಋಣಿಯಾಗಿದ್ದೇನೆ. ಈ ಪುಸ್ತಕದಲ್ಲಿ ಕಣ್ಣುತಪ್ಪಿ ಅಲ್ಲಲ್ಲಿ ಅಚ್ಚಿನ ದೋಷಗಳಿರಬಹುದು. ಅವನ್ನು ಮುಂದಿನ ಆವೃತ್ತಿಯಲ್ಲಿ ಓದುಗರ ಸಲಹೆ ಸೂಚನೆಯಿಂದ ಸುಧಾರಿಸಿ ಪ್ರಕಟಿಸುವೆವು.

ಜಿ. ಪಿ. ಗುರುಪಾದದೇವರಮಠ,
ಬಿ. ಎ. (ಆನರ್ಸ)
ಸಂಗ್ರಾಹಕ.

# ಪ್ರಕಾಶಕರ ನುಡಿ

"ಭಕ್ತಿಗೀತೆ" ಗಳ ಪ್ರಥಮ ಮುದ್ರಣವು ೧೯೫೦ ರಲ್ಲಿ ನಡೆಯಿತು. ಕೇವಲ ಎರಡು ವರ್ಷಗಳ ಅವಧಿಯಲ್ಲಿ ಪ್ರಥಮಾವೃತ್ತಿಯ ಎಲ್ಲ ಪ್ರತಿಗಳು ಮುಗಿದು ಹೋಗಿ ಈ ದ್ವಿತೀಯಾವೃತ್ತಿಯ ಕಾರ್ಯವನ್ನು ಕೈಗೊಳ್ಳಬೇಕಾಯಿತು. ಇದನ್ನು ಅವಲೋಕಿಸಿದಾಗ ಭಕ್ತಿರಸವನ್ನು ಬೀರುವ ಹಾಡುಗಳು ಜನತೆಗೆ ಎಷ್ಟು ರುಚಿಸುತ್ತಿವೆ? ನಿತ್ಯವೂ ಅವನ್ನು ಹಾಡಿ ಆನಂದಪಡಲು ಜನತೆ ಅದೆಷ್ಟು ಇಚ್ಛಿಸುತ್ತಿದೆ ಎಂಬುದು ಸ್ಪಷ್ಟವಾಗುತ್ತಿದೆ.

ಲೌಕಿಕದಲ್ಲಿ ನೊಂದ ಮನಸ್ಸಿಗೆ ಶಾಂತಿಯನ್ನು ಈಯುವ ಶಕ್ತಿ ಈ ಆಧ್ಯಾತ್ಮಿಕ ಹಾಡುಗಳಲ್ಲಿದೆ. ನೊಂದ ಮನಸ್ಸು ನಲಿಯಲು, ಧರ್ಮಶ್ರದ್ಧೆ ಜಾಗ್ರತವಾಗಲು, ನೈತಿಕ ಪಥದಲ್ಲಿ ನಡೆಯಲು ಈ ಹಾಡುಗಳು ಪ್ರೇರಿಸುವಂತಾದರೆ ಈ ಪುಸ್ತಕ ಪ್ರಕಟನೆಯ ಕಾರ್ಯ ಸಾರ್ಥಕವಾಯಿತೆಂದು ಬಗೆಯುತ್ತೇವೆ.

ಧಾರವಾಡ
೮-೧೦-೧೯೫೨

-ಪ್ರಕಾಶಕರು

—॥ ಶ್ರೀ ಶಿವಯೋಗೀಶ್ವರ ಪ್ರಸನ್ನ ॥—

# ಭಕ್ತಿ ಗೀತೆಗಳು



೧

ಧರೆಯ ಸುಖದ ಭೋಗವೆನಗೆ ಹರಿದು ಹೋಗಲಯ್ಯ ನಿಮ್ಮ । ಚರಣ ಕಮಲದಲ್ಲಿ ಮನವು ಮಗ್ನವಾಗಲಿ ॥ಪಲ್ಲ॥ ಒಡೆದ ಗಡಿಗೆ ಹರಿದ ಜೋಳ್ಗೆ ಎಡದ ಕೈಯ್ಯ ಮುರಿದ ಕೋಲು । ಹಿಡಿದು ಊರನೆಲ್ಲ ತಿರಿದು ತಂದು ನೋಡಲು ॥ ಒಡಲಿಗಾಗದಂತೆ ಮಾಡು ಪ್ರೌಢವಿಯೊಳಗೆ ಸುಖದ ಮೆಚ್ಚಿ । ಒಡೆಯ ನಿಮ್ಮ ಮರೆದು ಭವಕೆ ಬೀಳಲಾರೆನು. ॥೧॥ ಹಳಿದು ಹರಿವೆ ರಗಟೆ ಗಳನು ಹೊಲಿದು ಗಂಟನಿಕ್ಕಿ ಪ್ರೌವೆಯು । ಚಳಿಯುದಾಗಲೊಂದು ಕಡೆಗೆ ಸಾಲದಂದದಿ ॥ ಕಳೆಯುತಿರಲು ಅದರೊಳರ್ಧ ಇಲಿಗಳೆಳೆದು ಒಯ್ಯುತಿರಲಿ । ಒಲಿದು ನಿಮ್ಮ ಚರಣ ನೆನೆವುದಿಂತುಟಾಗದು॥೨॥ ಊರನೆಲ್ಲ ತಿರಿದು ಒಡಲ ಪೂರನುಂಬೆನೆನಲು ಮಧ್ಯ । ದಾರಿಯಲ್ಲಿ ತಿರಿದುದೆಲ್ಲ ಚಲ್ಲಿ ಹೋಗಲಿ ॥ ಮೀರಿಯಾಚೆ ಪುರವ ತಿರಿಯ ಯಾರು ಇಲ್ಲ ಎನಲು ಎನಗೆ । ಮಾರಹರನ ನೆನೆವುದಿಂತುಂಟಲ್ಲದಾಗದು ॥ ೩ ॥ ಒಡೆಯರುಗಳ ಮಠಕೆ ಬರಲು ಜಡಿದು ಜರಿದು ನೂಕಲೆನ್ನ । ಒಡನೆ ಯೋರ್ವರುಗಳ ಕೇಳಿನಲ್ಲಿ ಸೇರಲು ॥ ಕಡೆಗೆ ಅಟ್ಟಲವರು ಹಾಳು ಗುಡಿಗೆ ಬರಲು ಸೋರುತಿರಲು। ಒಡೆಯ ನಿಮ್ಮ ನೆನೆವು ದಿಂತುಂಟಲ್ಲದಾಗದು ॥೪॥ ಅಂಗಳದೊಳು ನಿಲ್ಲಲಿಕ್ಕೆ ಹಿಂಗದಿವನು ಕಳ್ಳ ನೆಂದು । ಹಿಂಗಿ ಹೋಗು ಕಡೆಗೆ' ಎಂದು ನುಡಿಯಲೆಲ್ಲರು ॥ ಹೀಂಗೆಬಾಗ ದನಕ ಜನರ ಸಂಗಬಿಡದು ಷಡಕ್ಷರಿಯ । ಲಿಂಗದಂಘ್ರಿ ನೆನೆವುದಿಂತುಂಟಲ್ಲ ದಾಗದು ॥೫॥

೨

ಕಾಡಲೇಕೆ ನರರುಗಳನು ಬೇಡಿ ಬಳಲಲೇಕೆ ಮನವೆ । ರೂಢಿಗೀಶ ನೆಮಗೆ ದೈವವಾಗಿ ಇರುತಿರೆ ॥ ಪಲ್ಲ ॥ ವೃಢನ ಪೂಜೆ ಮಾಡುವುದಕೆ

ಮಡುವಿನಗ್ಗವಣಿಗಳುಂಟು । ಆಡವಿಯಲ್ಲಿ ಕಾಡಪತ್ರಿ ಪುಷ್ಪವುಂಟಿಲ್ಲೈ ॥ ವಡಲಿಗನ್ನ ದುಡಿದರುಂಟ. ಗುಡಿಗಳುಂಟು ಶಯನಕೆಮಗೆ । ಒಡೆಯರುಗಳು ಬಿಸುಟಿದರುವೆ ಶೀತಕುಂಟಿಲ್ಲೈ ॥೧॥ ಬುದ್ಧಿಯನ್ನು ಹೇಳುವುದಕೆ ಆದ್ಯರುಗಳ ವಚನವುಂಟು । ಉದ್ಧರಿಸುವಡೆಮಗೆ ಶಿವನ ಮಂತ್ರವುಂಟಿಲ್ಲೈ ॥ ಆರ್ಧನಾರಿ ಎಂಬ ದೈವವಿದ್ದ ಬಳಿಕ ಕರದೊಳೆಮಗೆ ಹೊದ್ದಲೇಕೆ ನರರ ಆಶೆ ಮಾಡೆನಕ್ಕಟಾ ॥೨॥ ಮಿಗಿಲು ಮನೆಗಳೇತಕೆಮಗೆ ಅಗಲಲೇಕನನುಭಾವಿಗಳನು । ಜಗದೊಳೆಮಗೆ ಹಲವು ಕೋಟಲೆಗಳೇತಕ್ಕೈ ॥ ಸೊಗಸು ಷಡಕ್ಷರಿಯಲಿಂಗ ಅಗಲದೆಮ್ಮ ಕರದೊಳಿರಲು ಬೆಗಡುಗೊಳ್ಳಲೇಕೆ ಮನವೆ ನರರ ಮಾಳ್ಕೆಯಿಂ ॥೩॥

೩

ಕೋಗಿಲೇ ಚಲ್ವ ಕೋಗಿಲೇ ಮುದ್ದು ಕೋಗಿಲೇ ಜಾಣ ಕೋಗಿಲೆ ।ಪ। ಹಿಂದೆ ತಪದೊಳೀಶ ನೊಂದಿರು ತಿರಲೆಚ್ಚು ಬೆಂದಕಾಮನ ಬಿಟ್ಟು ಕೋಗಿಲೇ। ಬಂದು ಬೇಗದಿ ಬಾಲೇಂದುಧರನ ಕೂಡಿ ಕುಂದದೆ ನೀ ಬಾಳು ಕೋಗಿಲೇ ॥೧॥ ಮನುಮುನಿಗಳ ನೀತಿಯನು ಕೆಡಿಸುವ ದುಷ್ಟ ಮನಸಿಜನನು ಮೀರಿ ಕೋಗಿಲೆ । ಘನಪದವನು ತನ್ನ ನೆನೆವರಿಗೊಲಿದೀವ ಧನದ ಮಿತ್ರನ ಸಾರು ಕೋಗಿಲೆ ॥೨॥ ನಲ್ಲರನಗಲಿದ ಮೆಲ್ಲೆದೆಯರ ಕೊಲ್ವ ಫುಲ್ಲಶರನ ಪಿಂಗಿ ಕೋಗಿಲೆ । ಎಲ್ಲ ಜೀವರಿಗೆರವಿಲ್ಲದೊಲವನೀವ ಭಲ್ಲಭವನೊಳಿರು ಕೋಗಿಲೆ ॥೩॥ ಮಂಗಳರವದೊಳನಂಗನ ಬಣ್ಣಿಸೆ ಭಂಗವಲ್ಲವೆ ನೋಡು ಕೋಗಿಲೇ ॥೪॥ ದುರುಳ ಕಂತುವಿನೊಡನಿರೆ ಲೋಕದೊಳು ನಿನ್ನ ಪರಪುಟ್ಟನೆಂಬರು ಕೋಗಿಲೇ । ಧರೆಗೆ ಜನಕನಾದ ಗುರು ಶಂಭುಲಿಂಗನ ಚರಣ ಪಲ್ಲವ ಪಿಡಿ ಕೋಗಿಲೇ ॥೫॥

ತೋರದಯ್ಯಾ ಸುಖ ತೋರದಯ್ಯಾ ಸುಖ । ಬೇರೆ ಬೇರೆ ಭಾವಿಸಿ ಬ್ರಹ್ಮಜ್ಞಾನವಂದಿಲ್ಲದವಗೆ ॥ಪಲ್ಲ॥ ನಿಗಮಾಗಮುವನೋದಿ ಸುಗುಣಸಂತತಿಗೂಡಿ । ಜಗದೊಲವಾಂತು ತನ್ನ ಬಗೆಯನಾರೈಯದಿರೆ ॥೧॥ ಕಪಟವಳಿದು ಕೋಟಿ ಜಪವನೆಸಗಿ ಬಲು । ತಪವನೆ ಮಾಡಿ ತತ್ವದುಪದೇಶ ಪಡೆಯ

ದೈಯ: ॥೨॥ ಹಿಂಗದಣಿವಾದಿ ಸಿದ್ಧಿಯಂಗವಾಗಿ ಪೆರ್ವಲೋಕ ಡಂಗುರವೆನಿಸಿ ಶಂಭು ಲಿಂಗದನುವರಿಯದಿರೆ ॥೩॥

ಹರಪೂಜೆ ಗುರುಸೇವೆ ವರ ಪುಣ್ಯವಿಲ್ಲದೆ ಬರಿದೆ ಸುಖಭೋಗ ದೊರಕುವದುಂಟೆ ಆತ್ಮಾ ॥ಪಲ್ಲ॥ ಹಣವಿದ್ದಾಗಲೆ ಭಕ್ತಿ ನೆಣವಿದ್ದಾಗಲೆ ಸೇವೆ ಗುಣವಿದ್ದಾಗಲೆ ಮಾಡಿ ಮುಕ್ತಿ ಪಡೆಯಾತ್ಮಾ ॥ ಒಣ ಮಾತಾಡಿದರೆಲ್ಲ ಸಣ ಹರಿದು ಹೋಗುವದೆ । ತ್ರಿಣಯನೊಲಿಸುವದು ಬಹು ಕರಕಷ್ಟವಾತ್ಮಾ ।೧। ಹಿಂದಿನ ಪುಣ್ಯವನು ಇಂದುಂಡುಡಬೇಕಾತ್ಮಾ । ಇಂದಿನ ಪುಣ್ಯವನು ಮುಂ-ದುಂಡುಡಬೇಕಾತ್ಮಾ ॥ ಬಂಧನವೇಕಿದಕೆ ಇಂದುಧರನಾಜ್ಞ್ಯಾಗಿ । ಸಂದೇಹ ವಿಲ್ಲವು ತಿಳಿಕಂಡ್ಯಾ ಆತ್ಮಾ ॥೨॥ ಹರಿಅಜಸುರರೆಲ್ಲ ಶರೀರದಂಡನೆ ಮಾಡಿ । ಪರಮಾತ್ಮನೊಲಿಸಿದರು ಸುಗಮವಲ್ಲಲೆ ಆತ್ಮಾ ॥ ನರಪಾಪ ಪುಣ್ಯವನು ನರರ ಸೆರಗಿಲಿ ಹಾಕಿ । ಗುರುಮಹಂತ ಲಿಂಗತಾ ಮರೆಯಾಗಿರುತಿಹ ನಾತ್ಮಾ ॥೩॥

೬

ಲಾಲಿಲಾಲಿಯು ಪರ ಬ್ರಹ್ಮದ ಶಿಶುವೇ । ಮಾಲೆಯು ಧರಿಸುವೆ ಮಲ್ಲಿಗೆ ಹೂವಿನ ॥ಪಲ್ಲ॥ ಅಷ್ಟದಳದ ಕಮಲ ತೊಟ್ಟಿಲೊಳಗೆ ಮಲಗಿ । ಶ್ರೇಷ್ಠ । ಸದ್ಗುಣ ಹಸ್ತ ಪದಗಳನಾಡುತ ॥ ನೆಟ್ಟನೆ ನಿಟಿಲ ಭ್ರೂಮಧ್ಯದ ಜ್ಯೋತಿಯು ದಿಟ್ಟಿಸಿ ನೋಡುತ ಕುಲುಕುಲು ನಗುತಿಹ ॥೧॥ ಪ್ರಣವ ಘೋಷದ ನಾಗ ಸ್ವರವೇಣಿವಾಸುಖಿ । ಝುಣಲ್ ಝುಣಲ್ ಕಾಲಗೆಜ್ಜೆ ತಾಳ ಮೃದಂಗ ಭೇರಿ ॥ ಥಣಲ್ ಥಣಲ್ ಎಂಬುವ ಘಂಟೆ ಜಾಗಟೆ ನಾದವ। ಬಣ್ಣಿಸಲಿವ ಶಿವ ಸುಖಮಯ ಕಂದನ ॥೨॥ ಫಲಪದಂಗಳ ಮೀರಿ ಶಿವಪದವೆಂಬುವ । ಹೊಳೆವ ಮೇಲುಪ್ಪರಿಗೆ ಮೇಲೆ ಕುಳಿತು ಮಾಯಾ ॥ ಕಲಿಯುಗ ನರ್ತಕಿ ನಾಟ್ಯವ ನೋಡುತ । ನಲಿವ ಪರಶಿವ ಮಹಂತ ಲಿಂಗ ಶ್ರೀ ಬಾಲಕ ॥೩॥

೭

ಲಿಂಗಪೂಜೆಯು ಮಾಡಿರೋ ನಿಮ್ಮೊಳು ಪ್ರಾಣಲಿಂಗಪೂಜೆಯು ಮಾಡಿರೋ । ಗಂಗೆಯಮುನೆಗಳ ಸಂಗಮದೊಳು ಮಿಂದು ಶೃಂಗಾಟ ಕದುಪರಿ ರಂಗಮಂಟಪದೊಳು ॥ಪಲ್ಲ॥ ವರಭಕ್ತಿ ಜಲವನೀಡಿ ಮಜ್ಜನ

ಗೈದು ವಿರತಿ ಗಂಧವನೇ ತೀಡಿ । ಕರ್ಣೇಂದ್ರಿಯಗಳೆಂಬ ಮಿರುಗುವಕ್ಷತೆ ಇಟ್ಟು । ಅರಿವೆಂಬ ನಿರ್ಮಲ ಸರಸ ಪುಷ್ಪವ ಸೂಡಿ ॥೧॥ ಹರುಷವೆಂಬುವ ಧೂಪವ ಸಮರ್ಪಿಸಿ ವರಬಿಂದು ರುಚಿ ದೀಪವ । ನಿರದೆತ್ತಿ ಪರಿಪೂರ್ಣ ನೈವೇದ್ಯವನು ಮಾಡಿ॥ ಮೆರೆವ ತ್ರಿಗುಣವೆಂಬ ವರ ತಾಂಬುಲವ ಕೊಟ್ಟು।೨। ಕರದಿಷ್ಟಲಿಂಗವಿದೇ ಶರೀರದಲ್ಲಿ ಪರವಸ್ತು ತಾನಾಗಿಯೇ । ಹೊರ ಒಳಗೆರ ಡೆಂಬ ದೆರಿದರಿವನೆ ಮೀರಿ ॥ ಗುರುಸಿದ್ಧನಂಘ್ರಿಯೊಳ್ ಬೆರೆದೇಕಮಯ ವಾಗಿ ॥೩॥

೮

ಶರೀರವೆಂತೆಂಬುವ ಹೊಲವ ಹಸನ ಮಾಡಿ ಪರತತ್ವ ಬೆಳೆಯನೆ ಬೆಳೆ ದುಣ್ಣಿರೋ ॥ಪಲ್ಲ॥ ಶಮೆದಮೆ ಎಂತೆಂಬ ಎರಡೆತ್ತುಗಳ ಹೂಡಿ ವಿಮಲ ಮಾನಸವ ನೇಗಿಲನೇ ಮಾಡಿ । ಮಮಕಾರವೆಂತೆಂಬ ಕರಿಕೆಯ ಕಳೆದಿಟ್ಟು॥ ಸಮತೆ ಎಂತೆಂಬ ಗೊಬ್ಬರವ ಚಲ್ಲಿ॥೧॥ ಗುರುವರನುಪದೇಶ ಎಂಬ ಬೀಜವ ಬಿತ್ತಿ ಮೆರೆವ ಸಂಸ್ಕಾರ ವೃಷ್ಟಿಯ ಬಲದಿ । ಅರಿವೆಂಬ ಪೈರನ್ನೆ ಬೆಳೆಸುತ್ತ ಮುಸುಕಿರ್ದ ॥ ದುರಿತ ದುರ್ಗುಣವೆಂಬ ಕಳೆಯ ಕಿತ್ತು ॥೨॥ ಸ್ಥಿರಮುಕ್ತಿ ಎಂತೆಂಬ ಧಾನ್ಯವ ಬೆಳೆದುಂಡು ಪರಮಾನಂದದೊಳು ದಣ್ಣನೆ ದಣಿದು । ಗುರುಸಿದ್ಧನಡಿಗಳಿಗೆರಗುತ್ತ ಭವವೆಂಬ । ಬರವನು ತಮ್ಮ ಸೀಮೆಗೆ ಕಳುಹಿ ॥೩॥

೯

ಬಸವಗಣಾಧಿಪತೇ ನಮೋಗುರು ಬಸವಗಣಾಧಿಪತೇ।ಅಸಮನಯನ ಸಮಯ ಶರಧಿ ವಿದುಗುರು ॥ಪಲ್ಲ॥ ನಿತ್ಯನಿರಾಮಯ ನಿರುಪಮ ನಿರ್ಗುಣ । ಮೃತ್ಯುವಿಜಯ ಪರಮಾರ್ಥಚರಿತ ಗುರು ॥೧॥ ಚರಲಿಂಗಾರ್ಪಿತ ಶರೀರ ಕರಣಭವ । ವರ ಕರುಣಾಕರ ಶರಣಸಮೇಳಾ ॥೨॥ ಭಕ್ತನಿಧಾನ ವಿರಕ್ತ ಸುಪೂಜಿತ । ಮುಕ್ತಿಯ ಘನಮಠ ಕರ್ತೃಪರಮಗುರು ॥೩॥

೧೦

ಧ್ಯಾನವ ಮಾಡೋ ನಿಜಗುರು ಧ್ಯಾನವಮಾಡೋ । ಮಾನವ ನೀನತಿ ಮತಿಯುತನೆನಿಸುತೆ ॥ಪಲ್ಲ॥ ಜಪದೊಳಗನುದಿನ ನಗರೊರಧಿಕಮೆಂದು । ಪೊಗಳುವ ಶೃತಿಮತವಗಲದೆ ಮುದದೊಳು ॥೧॥ ವರಕರುಣದೊಳದಿ

ಗೆರಗಿದ ವರಸ್ಮರ । ಹರನೆನಿಸುವ ಶರಣರಸುರ ಭೂಜನ ॥೨॥ ಮನು ಮುನಿ ಜನಸುರ ಗಣರಿಗೆ ಮೊದಲಿಗ । ನೆನಿಸಿದನಘ ಶ್ರೀ ಘನಮಠವಾಸನ ॥೩॥

೧೧

ಕಾಯಕಾಂತಾರವ ಹೊಕ್ಕು ಬೇಟೆಯನಾಡಿ ಮಾಯಾ ಮೋಹದ ವೃಗಗಳ ಕೊಲ್ಲಿರೋ ॥ಪಲ್ಲ॥ ಕೋಪವೆಂತೆಂಬುವ ಹಿರಿಯ ಹುಲಿಗಳುಂಟು। ಪಾಪವೆಂದೆಂಬ ಸೂಕರಗಳುಂಟು॥ ಚಾಪಲ್ಯ ಗುಣಗಳೆಂದೆಂಬ ಜಿಂಕೆಗಳುಂಟು। ಕಾಪಟ್ಯವೆಂತೆಂಬ ನರಿಗಳುಂಟು ॥೧॥ ಮೊರೆವಷ್ಟ ಮದಗಳೆಂದೆಂಬ ಕೋಣಗಳುಂಟು । ಬರಿಯಾಡಂಬರವೆಂಬ ಕರಡಿಯುಂಟು ॥ ಉರಿವ ಮಾತ್ಸರ ಬುದ್ಧಿ ಎಂಬ ಕೇಸರಿಯುಂಟು । ಮಂದೆ ಎಂತೆಂಬುವ ಗಜಗಳುಂಟು ॥೨॥ ಪರಮ ಸದ್ಭಕ್ತಿ ಎಂತೆಂಬ ಬಿಲ್ಲನೆ ಮಾಡಿ ॥ ವಿರತಿಯುಂತೆಂಬ ಸಿಂಜನಿಯ ಹೂಡಿ ॥ ಅರಿವೆಂಬ ಬಾಣದೊಳವನೆಚ್ಚು ಕೆಡಹುತ್ತೆ । ಗುರು ಸಿದ್ಧನಂಘ್ರಿ ಪಂಕಜಕೆರಗಿ ॥ ೩ ॥

೧೨

ಯೋಗಿಯ ಕಂಡಿರೇನೆ ಪರಶಿವ ಮಹಾಯೋಗಿಯ ಕಂಡಿರೇನೆ । ಆಗಮ ನಿಗಮಗೋಚರಪರ ಶಿವನಾಗಿ ॥ ತೂಗಾಡುತಿಹನು ಭಕ್ತರಮನೋಭಾವದೋಳ್ ॥ಪಲ್ಲ॥ ಗತಿಯ ಪಾಲಿಸು ಕಾರಣಾ ಭಕ್ತರಿಗೆಲ್ಲ ಸುತನಾಗಿ ಬಂದಿಹನು । ಅತಿಶಯ ಕೈಲಾಸ ಅಧಿಪತಿ ಈತನೆ । ಹತಮಾಡಿ ಕಾಮನ ಸತಿಯರೊಳ್ ನಲಿವನು ॥ ೧ ॥ ಸರ್ವಾಂಗ ಲಿಂಗಮಯನು ತಾನಾಗಿರುತಿಹನು ನಿರ್ಮಲದಿ । ಹರಿದಾಡುವ ಮನವನು ಹರಗೆ ಸಮರ್ಪಿಸಿ ॥ ಪರಶಿವಾನಂದ ಸಂಭ್ರಮದೊಳಗಿರುತಿಹ ॥೨॥ ನೆಲವನುಪ್ಪರಿಗೆ ಶಿಲಾ ರತ್ನಂಗಳ ಒಂದೇ ಮಾಡಿರುತಿಹನು । ಮಳೆಯೊಳು ತೊಯದಾಗಸದಂತೆ ಮಹಂತಲಿಂಗ ಇಳೆಯ ಜನರ ಭಕ್ತಿ ಭಾವದೊಳಿರುತಿಹ ॥ ೩ ॥

೧೩

ಅನುಭವದಡಿಗೆಯ ಮಾಡಿ । ಅದಕ್ಕನುಭವಿಗಳು ಬಂದು ನೀಡಿ ಕೂಡಿ ॥ಪಲ್ಲ॥ ತನುವೆಂಬ ಭಾಂಡವ ತೊಳೆದು । ಕೆಟ್ಟ ಮನದ ಜಂಜಡವೆಂಬ ಮುಸುರೆಯ ತೊಳೆದು ॥ ಘನವೆಂಬ ಮನೆಯನೆ ಬಳಿದು । ಅಷ್ಟ ಮಿನುಗು ತ್ರಿಗುಣವೆಂಬ ಒಲೆಗುಂಡ ತುಳಿದು ॥೧॥ ವಿರತಿ ಎಂಬುವ ಮಡಿ

ಯುಟ್ಟು । ಪೂರ್ಣ ಹರಭಕ್ತಿ ಎಂತೆಂಬ ನೀರನೆಸರಿಟ್ಟು ॥ ಅರಿವೆಂಬ ಬೆಂಕಿಯ ಕೊಟ್ಟು । ಮಾಯಾ ಮರವೆಯೆಂಬುವ ಕಾಷ್ಟಗಳನೆಲ್ಲ ಸುಟ್ಟು॥೨॥ ಪರವೆಂಬ ಸಾಮಗ್ರಿಗೂಡಿ । ಸಾರತರಮೋಕ್ಷವೆಂದೆಂಬ ಪಾಕವ ಪಾಡಿ ॥ ಹರಶರಣರು ಸವಿದಾಡಿ । ನಮ್ಮ ಗುರುಸಿದ್ಧ ದೇವನ ಚರಣವ ಪಾಡಿ ॥೩॥

೧೪

ಶ್ರೀಗುರು ವಚನುಪದೇಶವನಾಲಿಸಿ ದಾಗಳಹುದು ನರರಿಗೆ ಮುಕುತಿ ॥ಪಲ್ಲ॥ ದುರಿತಕರ್ಮವನೊಲ್ಲದಿರು ಪುಣ್ಯವನೆ ಮಾಡು ಹರನಡಿ ವಿಡಿಶಾಂತರೊಡನಾಡು । ಕರುಣವಿರಲಿ ಜೀವರೊಳು ನೀತಿವಿದನಾಗು ॥ ಪೊರೆಪೊರ್ದಿಧರನೆಂದು ಬೆಸಸುವಾ ॥೧॥ ನಿಂದಿಸಿ ನುಡಿಯುದಿರಾರನು ಮನ ಸಿಗೆ ಬಂದಂತೆ ನಡೆಯುದಿರಿಹದಲ್ಲಿ ॥ ಕುಂದುವಡೆಯದಿರು ಕಾಮಾದಿಗಳನು ಜಯಿ । ಸೆಂದು ಕೈವಿಡಿದನುಗ್ರಹಿಸುವಾ ॥೨॥ ಭವಮಾಲೆಗಲಸು ಪುಸಿಯು ದಿರೆಡರು ಬಂದು ಕವಿಯಲಂಜದಿರು ಸಂಪದದೊಳು ॥ ತವೆಮುದವಳಿದಿರು ತತ್ವಸಂತತಿಯನು ವಿವರಿಸಿ ನೋಡೆಂದು ತಿಳಪುವ ॥೩॥ ಬಳಸದಿರದ್ವೈತ ವನು ಬಾಹ್ಯದಲಿ ನಿನ್ನೊಳಗೇಕೋ ಭಾವನೆಯೊಡಗೂಡು । ತಿಳಿದು ಸಮಯ ನಿಷ್ಠೆಗಲಿ ವೇದವಿಧಭಕ್ತಿಗಳನಗಲದಿರೆಂದುಸುರುವ ॥ ೪ ॥ ಆರು ನಾನೆಂದು ವಿಚಾರಿಸು ವಿಷಮ ಸಂಸಾರವಿದನು ಕನಸೆಂದರಿದು । ಮಾರ ಮರ್ದನ ಶಂಭುಲಿಂಗನನೊಲಿಸಿ । ಗಂಭೀರ ಸುಖದೊಳಿರೆಂದುಸುರುವ॥೫॥

೧೫

ಏಳು ಮಹಜ್ಞಾನಿ ಶಿವಯೋಗಿ ಮುನೀಶ್ವರ। ತಾಳ ಮೃದಂಗ ಬ್ರಹ್ಮ ನಾದ ಘೋಷವ ಕೇಳು ॥ಪಲ್ಲ॥ ಸಾಮಗಾನ ವಿನೋದ ಸ್ವಾಮಿ ಶ್ರೀ ಪ್ರಭುಮಾಯಾ । ಕಾಮಸಂಹರ ಭಕ್ತ ಪ್ರೇಮಿದಯಾಳು ಶಿವ ॥ ೧ ॥ ಲಿಂಗಾಂಗ ಸಮರಸದ ಸಂಗೀತ ಪಾಡುವ । ಸಂಗಶರಣರ ಮೇಳ ಲಿಂಗ ದಟ್ಟಿತು ನೋಡು ॥೨॥ ಮಂತ್ರ ಶಕ್ತಿಯರು ಮಹಾಮಂತ್ರ ಮೂರ್ತಿಗಳು । ಬಂದು ನಿಂತು ಮಹಂತೇಶಾ ಜಯತೆಂದು ಪಾಡುವರು ॥ ೩ ॥

೧೬

ಏಳಯ್ಯಾ ನಿಮ್ಮ ತಾಯ್ತಂದೆಗಳು ಬಂದಿಹರು । ಭಾಳಾಕ್ಷ ಶಿಶು ಮಹಂತ ಲಿಂಗ ದೊರೆಯೇ ॥ಪಲ್ಲ॥ ಬಸವ ಮಡಿವಳ ಚನ್ನ ಸಿದ್ಧರಾಮೇ

ಶ್ವರರು । ಕುಶಲ ಪ್ರಭು ಮುಖ್ಯ ಅಜಗಣ್ಣ ತಂದೆಗಳು ॥ ಅಸಮ ಪರತರ ಗೌರೀ ಮಹದೇವಿ ಮುಕ್ತಾಯಿ । ವ್ಯಸನಳಿದ ನೀಲಮ್ಮ ಮುಖ್ಯ ತಾಯಿಗಳು ॥೧॥ ಶಿವಯೋಗ ಮುದ್ರೆ ನಿಜಾನಂದ ಸುಖದೊಳಗೆ । ಅವಿರತಂ ಮಲಗಿರುವ ಗುರುಪುತ್ರನೇ ॥ ಶಿವ ರುದ್ರ ಪ್ರಮಥ ಗಣ ದೇವ ಗಣಭಕ್ತ ಗಣಕವಿದು ಬಂದಿಹರು ಮಹಗಣರು ಸಹಿತ ॥೨॥ ಭೃಂಗಿ ನಾರದ ಮುಖ್ಯ ಸಂಗಶರಣರು ಬಂದು । ಮಂಗಲ ಮೃದಂಗ ಮಹತಾಳ ಮೇಳದಲಿ ॥ ಝೇಂಕರಿಪ ಸಂಗೀತ ನಾದವನು ಮಾಡುವರು।ಲಿಂಗ ಶಿಶುಮಹಂತ ನಿಮ್ಮ ಪಾಡಿ ಹರಸುತಲಿ ॥೩॥

೧೭

ಸದ್ಗುರು ದೇವಾ ನೀ ಮಾಡಿದುಪಕೃತಿಯನು ನಾನು ಮರೆಯುವದಿಲ್ಲೆಂದೆಂದಿಹದೊಳು ॥ಪಲ್ಲ॥ ಪೊಡವಿಯೊಳಖಿಳ ವೇದಾಗಮ ಶಾಸ್ತ್ರವ । ಬಿಡದೆ ಸಾಧಿಸಿದ ವಾದಿಗಳೆಲ್ಲ ॥ ಕಾಣದ ಪರತತ್ವವನು ನೀನು ಒಡಿದೆನ್ನ ಕರಕೆ ಕೊಟ್ಟುದರಿಂದ॥೧॥ ಕಂದಮೂಲಗಳ ಸೇವಿಸಿ ವಾಯುಗಳನೊತ್ತಿ । ಬಂಧಿಸಿ ಪಂಚಾಗ್ನಿಯ ಮಧ್ಯದೆ ॥ ನಿಂದು ಯೋಗಿಗಳು ನೋಡುವ ಪರಬ್ರಹ್ಮವ । ತಂದೆನ್ನ ಕಣ್ಗೆ ತೋರಿದುದರಿಂದ ॥೨॥ ತರಳನೆನ್ನಯ ಮೇಲೆ ದಯಹುಟ್ಟಿ ಶಿವನೇ ಶ್ರೀ ಗುರುಸಿದ್ಧನೆಂಬ, ನಾಮವನಾಂತು ॥ ಗುರುರೂಪದಿಂದೆನ್ನ ಬೋಧಿಸಿ ತನ್ನೊಳು । ಬೆರಸುತ್ತ ಮೋಕ್ಷವಿತ್ತುದರಿಂದ ॥೩॥

೧೮

ನಿನ್ನ ನಾನೇನ ಬೇಡಲಿ ದೇವಾ । ಕೊಡಲೆನಗೆ ನಿನ್ನೊಳೇನುಂಟಿಲ್ಲವನೆ ನಾನೇ ತಿಳಿದು ॥ಪಲ್ಲ॥ ಅಶನವನು ಬೇಡುವೆನೆ ಕಾಳಕೂಟವು ಹೋ ದೇವಾ । ವಸನವನು ಬೇಡುವೆನೆ ಸೆಡೆಪಾನೆದೊಗಲು ॥ ಪೊಸಭೂಷಣವ ಬೇಡುವೆನೆ ಭೀಕರಾದಿಗಳು । ಮಿಸುಪ ಗಂಧವನೆ ಬೇಡುವೆನೆ ಹೆಣದ ಬೂದಿ ॥೧॥ ತುರಗವನು ಬೇಡುವೆನೆ ಬಹುದಿನದ ಮುದಿ ಎತ್ತು । ಕರದ ಪಾತ್ರೆಯನು ಬೇಡುವೆನೆ ತಲೆಯೋಡು ॥ ಅರಮನೆಯ ಬೇಡಿ ಕೊಂಡೆನೆ ಪಿತೃವನ ಭೂಮಿ । ಪರಿಚಾರಕರನು ಬೇಡುವೆನೆ ಭೂತಗಳು ॥ ೨ ॥ ನಿನ್ನ ಸದ್ಗುಣದ ಸಿರಿಯದಿಂತು ಭಿಕ್ಷಾವೃತ್ತಿ । ನಿನ್ನ ನಿರ್ಗುಣ ಸುಖವ

ನೋಡೇ ಕೇವಲವು ॥ ಇನ್ನಿದೊಂದನೆ ಬೇಡೆನಗೆ ನಿನ್ನಯ ಭಕ್ತಿ । ಯನ್ನೇ ಕರುಣಿಸಿ ಸಲಹು ಗುರುಸಿದ್ಧರೂಪಾ ॥ ೩ ॥

೧೯

ಏನೆನ್ನುತ ನಂಬಿ ಭಜಿಸಲಿ ನಿನ್ನ । ನಾನಾತ್ಮಗಳನಿಂತು ತಿಳಿದೆಲೆ ಶಿವನೇ ॥ಪಲ್ಲ॥ ಪರಿಶುದ್ಧನೆಂಬೆನೆ ಪಶುದೊಗಲನುಟ್ಟಿಹೆ । ಕರುಣಿ ಎಂಬೆನೆ ಕಾಮನನೆ ಕೊಂದಿಹೆ ॥ ವಿರತನೆಂಬೆನೆ ವನಿತೆಯ ನೆಡೆವಿಡಿದಿಹೆ । ಸಿರಿವಂತ ನೆಂಬೆನೆ ತಿರಿಕೊಂಬೆ ಶಿವನೇ ॥೧॥ ಕುಲವಂತನೆಂಬೆನೆ ಶ್ವಪಚರೊಳುಂಡಿಹೆ । ಬಲುಶಾಂತನೆಂಬೆನೆ ಆಸಿಯಾಂತಿಹೆ ॥ ಕಲಿ ಎಂಬುವೆನೆ ಬಿಲ್ಲ ಪೆಟ್ಟನೆ ತಿಂದಿಹೆ । ಚಲುವನೆಂಬೆನೆ ರುಂಡದಳೆದಿಹೆ ಶಿವನೆ ॥೨॥ ನೆರೆ ಪೂಜ್ಯನೆಂಬೆನೆ ಕುಂಟಣಿಯಾಗಿಹೆ । ದೊರೆಯೆಂಬುವೆನೆ ಬಿಟ್ಟೆಯನೆ ಹೊತ್ತಿಹೆ ॥ ಹಿರಿಯ ಕಿರಿಯ ಎಂಬ ಈ ಗುಣಮುರ್ಮವ । ಗುರುಸಿದ್ಧರೂಪ ನಾನರಿವೆನೆ ಶಿವನೇ ॥೩॥

೨೦

ತನುವೆಂಬ ಗರುಡಿಯೊಳನುಭವ ಧೀರರು । ಘನಯೋಗ ಸಾಧನೆ ಯನು ಮಾಡಿರೋ ॥ ಮನುಜರೊಲಿವ ನಿಮ್ಮ ಬಿನಗು ಸಾಧನೆಯಿಂದ । ಜನನ ಮರಣವಂಜಿ ಓಡುವವೇ ॥ಪಲ್ಲ॥ ಸ್ಥಿರಬುದ್ಧಿಯಂದೆಂಬ ಸಮ ನಾದ ನೆಲದೊಳು । ಗುರುಬೋಧೆಯೆಂಬ ದಂಡೆಗಳನೊತ್ತಿ ॥ ಪರತತ್ವವಿವ ರದ ಬಸಿಗೆಗಳನೇ ಹಾಕು । ತರಿವೆಂಬ ಕೋಣತವನೊತ್ತಿ ಕಟ್ಟಿ ॥೧॥ ನಾದ ಬಿಂದುಗಳೆಂಬ ಸಂಗ್ರಾಣಗಳನೆತ್ತು । ತಾದಿ ಚಿತ್ಕಳೆಯುಲೊಡನೆ ತಿರುಹಿ ॥ ಮೋದದಿನಡುನಾಡಿಗಂಭದ ತುದಿಗೇರಿ । ಭೇದಿಸಿ ಬ್ರಹ್ಮಸಾಧನೆಗಲಿತು ॥೨॥ ಭರದಿಂದೆ ಯಮಭಟರುಗಳನು ಮುರಿದೊತ್ತಿ । ಪರಿಭವವೆಂದೆಂಬ ವೈರಿ ಯನೆ ಕೊಂದು ॥ ಗುರುಸಿದ್ಧನೆಂಬ ಚಕ್ರೇಶನ ಮೆಚ್ಚಿಸಿ । ವರಮುಕ್ತಿ ಪದವಿಯ ಪಡೆಯಲೆಂದು ॥೩॥

೨೧

ಬಿಡು ಬಾಹ್ಯದೊಳು ಡಂಭವ । ಮಾನಸದೊಳ್ ಎಡೆಬಿಡಿದಿರು ಶಂ ಭುವ ॥ಪಲ್ಲ॥ ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ । ಪಡೆದರೆ ಶಿವ ನಿನಗೊಲಿವನೆ ಮರುಳೇ ॥ಅನುಪಲ್ಲ॥ ಜನಮೆಚ್ಚಿ ನಡಕೊಂಡರೇನುಂಟು

ಲೋಕದಿ| ಮನಮೆಚ್ಚಿ ನಡೆಕೊಂಬುವುದೇ ಚಂದವು || ಜನರೇನು ಬಲ್ಲರು ಒಳಗಾಗೋ ಕೃತ್ಯವ ಮನಪರಿಯದ ಕಳ್ಳತನವಿಲ್ಲವಲ್ಲಾ ||೧|| ಜನರು ಮೆಚ್ಚುತಿ ನಿನ್ನ ಕೈಲಾಸಕೊಯ್ವರೇ ಜನ ಮೆಚ್ಚದಿರೆ ಶಿವ ಬಿಡುತಿಹನೇ || ಜನರಿಲ್ಲಿ ನಿನ್ನನು ದೊಡ್ಡಾತನೆಂದರೆ | ಚಿನುಮಯ ಶಿವನಲ್ಲೆ ಅರಿಯನೆ ಮರುಳೇ ||೨|| ಮನದೊಳು ಶಿವತಾನೆ ಮನೆ ಮಾಡಿಕೊಂಡಿಹ | ಮನಮೆಚ್ಚಿ ನಡೆದರೆ ಶಿವಮೆಚ್ಚುವ || ಮನಕಂಜಿ ನಡೆಯದೆ ಜನಕಂಜಿ ನಡೆದರೆ ಮನದಾಣ್ಮ ಗುರುಸಿದ್ಧ ಮರೆಯಾಗುವನಲ್ಲ ||೩||

೨೨

ಏತಕೆ ಚಿಂತೆಯನು ಮಾಡುವೆ ಮೂಢಾ | ವಿಶ್ವನಾಥನೇ ಪೋಷಿಪನು ಯೋಚಿಸಬೇಡಾ ||ಪಲ್ಲ|| ಯಾರು ನಮಗಾಗುವ ಸಹಾಯರಿಲ್ಲ | ವೆಂದು ಹಾರೈಸಿ ಸುಮ್ಮನೆ ಬಳಲುವೆಯಲ್ಲ || ಮೂರು ಲೋಕಂಗಳನು ಪಾಲಿಸಬಲ್ಲ | ನಮ್ಮ ಮಾರಾರಿ ನಿನ್ನೋರ್ವನ ಮರೆಯುವದಿಲ್ಲ || ೧ || ಮಕ್ಕಳು ಮರಿಗೆ ಮುಂದೆ ದಾರಿ ಏನು | ಎಂದು ದುಃಖದೊಳು ಕೊರಗಿ ಸಾಯುವೆ ನೀನು || ಮಕ್ಕಳು ಗರ್ಭದೊಳಿರುವಾಗ ತಾನು | ತುತ್ತನಿಕ್ಕಿ ಸಾಕಿದೀಶ ನೀವಾಗಿಲ್ಲವೇನು||೨|| ಬೆಟ್ಟದ ತುದಿಯೊಳಿರ್ಪ ಪ್ರಾಣಿಗಳಿಗೆ|ಅನ್ನವಿಟ್ಟು ಸಾಕುವೀಶನೇ ದಿಕ್ಕೆನ್ನುತೊಳಗೆ || ನಿಷ್ಠೆಯಿಂ ನಂಬಿದರೆ ತಪ್ಪದರಗಳಿಗೆ | ತಾನೆ ಕಟ್ಟಿ ತಂದು ಕೊಡುವ ತನ್ನಯ ಬಳಿಗೆ || ೩ || ಆಸೆಯಿಂದಿರುವೆ ನಾಳೆ ಗುಂಬೆನೆಂದು | ಧಾನ್ಯ ರಾಸಿಯನೆ ಮಾಡಿ ಹೋಗುವದು ಸಂದು || ಏನುಕಾಲವಿರಲಾನೆ ಮುಂದಕ್ಕೆಂದು | ಮೇವನಾಸಿಸದೆ ಬಾಳ್ವುದ ನೀ ತಿಳಿದಿಂದು ||೪|| ಪಕ್ಷಿಗಳಿತ್ತತ್ತಲೈದಿ ಮೇಯುವಂತೆ | ಸರ್ವ ವೃಕ್ಷಂಗಳೇನೈದಿ ಮೇಯುವವೆ ಮುಂತೆ || ಪಕ್ಷಿ ವೃಕ್ಷಾದಿಗಳ ಪೋಷಿಸುವಂತೆ ನಿನ್ನ ರಕ್ಷಿಪನು ಗುರುಸಿದ್ಧನೆಲೋ ಭ್ರಾಂತೇ ||೫||

೨೩

ಸ್ಥಿರ ಮುಕ್ತಿ ಪಡೆಯದ ನರಜನ್ಮವೇಕೆ | ಪರಮನ ನೆಲ ಗುಣದತಿ ಜಾಣ್ಮೆಯೇಕೆ ||ಪಲ್ಲ|| ಸಲೆ ಸತ್ಯವಿಲ್ಲದ ಸುಜನತ್ವವೇಕೆ | ನೋಳೆವ ಕಾಮನ ಕೊಲ್ಲದತಿತನವೇಕೆ || ಆಳಿಯಾಸೆಗೆಡದಿಹ ಸನ್ಯಾಸವೇಕೆ | ಒಳಗೆ ಸಂಶಯಗೊಂಬ ಅದ್ವೈತವೇಕೆ ||೧|| ಹರಿವ ವಾಯುವ ನಿಲ್ಲಿಸದ ಯೋಗವೇಕೆ |

ಪರಮಾರ್ಥವಿಡಿಯದ ಬಹು ಶಾಸ್ತ್ರವೇಕೆ ॥ ಕರುಣೆ ಶಾಂತಿಗಳಿಲ್ಲದಿಹ ತಪವೇಕೆ । ಹೊರಗೊಳಗೊಂದಾಗದನುಭವವೇಕೆ ॥೨॥ ತನುವ ಬೇರಿಡದನುಸಂಧಾನವೇಕೆ । ತನಗೆ ನಿಶ್ಚಯವಿಲ್ಲದುಪದೇಶವೇಕೆ ॥ ಮನದ ಬಯಕೆಯುದಗದ ಮೌನವೇಕೆ । ಘನವನಾಲಿಂಗಿಸದುಪರತಿ ಏಕೆ॥೩॥ ನೀನಾನೆಂಬುವಯದ ಭಕ್ತಿಯದೇಕೆ । ನಾನಾತ್ವವನು ಭೇದಿಸದ ತತ್ವವೇಕೆ ॥ ತಾನಾರೆಂದರಿಯದ ಯುಕ್ತಿಯದೇಕೆ । ಜ್ಞಾನವಿಲ್ಲದ ದೀರ್ಘ ವೈರಾಗ್ಯವೇಕೆ ॥೪॥ ಪರಿಭವವನು ಕೆಡಿಸದ ಗುರುವೇಕೆ । ಪೆರತಾಗಿ ಪೂಜೆಗೊಂಬುವ ದೈವವೇಕೆ ॥ ಪರಿಪೂರ್ಣ ಭಾವವಿಲ್ಲದ ಲಕ್ಷ್ಯವೇಕೆ । ಗುರುಸಿದ್ಧನಾಗಿ ನಿಲ್ಲದ ಸೌಖ್ಯವೇಕೆ ॥೫॥

೨೪

ಬೇಡಿಕೊಂಬುವೆನಭವಾ ನಿನ್ನಂಘ್ರಿಯನು ತಳುವ । ಮಾಡದೀ ವರಗಳನೆ ಕರುಣಿಸೆಲೆ ದೇವಾ ॥ಪಲ್ಲ॥ ಮನದೊಳಗೆ ನಿನ್ನ ಸಂಸ್ಮರಣೆಯನು ನಾಲಗೆಯ । ಕೊನೆಯಲ್ಲಿ ಪಂಚಾಕ್ಷರಿಯನೆ ನುಡಿವುದನು ॥ ತನುವಿನೊಳು ನಿನ್ನ ಸೇವೆಯ ಮಾಳ್ಪುದನು । ಕಿವಿಯೊಳನುದಿನವು ಪ್ರಣವ ನಾದವನೆ ಕೇಳ್ವುದನು ॥೧॥ ಪರಬಿಂದು ಕಾಂತಿಗಳ ನೇತ್ರದೊಳು ನೋಳ್ಪುದನು । ಕರದೊಳಗೆ ನಿನ್ನ ಪೂಜೆಯನೆ ಮಾಳ್ಪುದನು ॥ ಮರೆದಾದೊಡಿಹ ಪರಕೆಳಸದಿಹ ವಿರತಿಯನು ಶರೀರವಿರುವನ್ನವರಿತವರ ಸಂಗವನು ॥೨॥ ಆವ ಕಾಲದೊಳು ತತ್ವಾನುಭವವನು । ಕಾಣುವೀ ವಿಶ್ವವೆಲ್ಲ ಪುಸಿ ಎಂಬ ಪ್ರಜ್ಞೆಯನು ॥ ಭಾವದೊಳು ನೀನೆ ನಾನೆಂಬ ಸಂಧಾನವನು । ದೇವ ಗುರುಸಿದ್ಧನೊಳು ಕಡೆಗೆ ಮುಕ್ತಿಯನು ॥೩॥

೨೫

ಗುಣಗಳೆ ಭೂಷಣವಲ್ಲದೆ ಸರ್ವರ್ಕ್ಕೆ । ಮಣಿ ಹೇಮಾದಿಗಳು ಭೂಷಣವಲ್ಲವು ॥ ಮಣಿ ಹೇಮ ಭೂಷವಾ ದೇಹಾಂತವಿರವಿಂತೀ । ಗುಣಭೂಷಣವಾ ಚಂದ್ರಾರ್ಕವದಾಗಿಯೇ ॥ಪಲ್ಲ॥ ಚರಣಗಳಿಗೆ ತೀರ್ಥಯಾತ್ರೆಯೇ ಭೂಷಣ । ಕರಕೆ ಸತ್ಪಾತ್ರದಾನವೇ ಭೂಷಣ ॥ ಗುರುಪಾದ ಪ್ರಣತಿಯೇ ಸಿರಸಿಗೆ ಭೂಷಣ । ಹರದರುಶನವೇ ನೇತ್ರಕೆ ಭೂಷಣ॥೧॥ ಅನುಪಮ ಸತ್ಯವೇ ರಸನೆಗೆ ಭೂಷಣ । ಘನ ಪುಣ್ಯಕಥೆಯೆ ಕರ್ಣಕೆ ಭೂಷಣ ॥ ತನುವಿಗೆ ಪರಕಾಂತಾಜಹನವೇ ಭೂಷಣ । ಮನಸಿಗೆ ಧರ್ಮ ಚಿಂತೆಯೇ

ಭೂಷಣ ||೨|| ಪರಿಪೂರ್ಣ ವಿದ್ಯಗಗರ್ವವೇ ಭೂಷಣ | ಸಿರಿಗೆ ದೀನರ ಪೋಷಣೆಯೇ ಭೂಷಣ || ನರಜನ್ಮಕ ಹಿತಾಹಿತಾಸ್ಥೆಯೇ ಭೂಷಣ | ದುರಿತ ಭೀತಿಯೇ ಸೌಜನ್ಯಕೆ ಭೂಷಣ ||೩|| ಧರೆಯೊಳಹಿಂಸೆಯೇ ಕರುಣಕ್ಕೆ ಭೂಷಣ | ಪರತರ ತಪಕೆ ಶಾಂತಿಯೇ ಭೂಷಣ || ದರುಶನಾಶ್ರಮಕೆಲ್ಲ ವಿರತಿಯೇ ಭೂಷಣ ! ವಿರತಿಗೆ ಬ್ರಹ್ಮವಿದ್ಯೆಯೇ ಭೂಷಣ ||೪|| ಸರಿಪೂರ್ಣ ಲಕ್ಷ್ಯವೇ ಯೋಗಕ್ಕೆ ಭೂಷಣ | ಪರಿವಿಗೆ ನಿರ್ವಿಕಲ್ಪವೇ ಭೂಷಣ || ಗುರುಸಿದ್ಧನಮಲ ಕೃಪಾಲಬ್ಧ ಮುಕ್ತಿಯೇ ! ಪರಿಕಿಸಲಿಂತಿವೆಲ್ಲಕು ಭೂಷಣ ||೫||

೨೬

ಏನಿರ್ದೊಡೇನು ನಿಜಬೋಧೆಯೊಂದಿಲ್ಲದಿರೆ | ಕಾನನದ ಬೆಳದಿಂಗಳಂತೆ ನಿಷ್ಫಲವು ||ಪಲ್ಲ|| ಕಾಯದೊಳು ಮನ್ಮಥನ ಪಳಿವ ಸುಂದರರೂಪು | ಬಾಯೊಳೆಲ್ಲರ ಮರುಳುಗೊಳಿಪ ಜಾಣ್ ನುಡಿಯು || ಆಯುವಾಗಿರ್ದ ತನ್ನಿರವ ತಾನರಿಯದಿರೆ | ನಾಯಮೊಲೆಯೊಳಗಿರ್ದ ಹಾಲಿನಂತಿಹುದು ||೧|| ಚಂಡಪ್ರತಾಪದಿಂದರಿಗಳನು ಜಯಿಸಿ | ಭೂಮಂಡಲವನೆಲ್ಲ ಓರ್ವನೆ ಆಳುತಿರ್ದು || ಪಿಂಡದೊಳಗಿರ್ಪ ಜೀವಾತ್ಮರನುವರಿಯದಿರೆ | ರಂಡೆಗೊದಗಿರ್ದ ಯೌವನದಂತಿಹುದು ||೨|| ಅಣಿಮಾದಿ ಸಕಲ ಸಿದ್ಧಿಗಳೊಡನೆ ತನ್ನ ಮನ | ದಣಿವಂತೆ ನಾಕ ಲೋಕದೊಳು ಪರಿಣಮಿಸಿ || ಅಣಿಯೆರದೆ ಗುರುಸಿದ್ಧನೊಡನೈಕ್ಯವಡೆಯದಿರೆ | ಹೆಣಕೆ ಮಾಡಿದ ಶೃಂಗಾರದಂತಹುದು ||೩||

೨೭

ಬಸವಾದಿ ಪ್ರಮಥರ ಚರಣಸಾರಗಳಿಗೊಸೆದೆನ್ನ ಮನವನಾರಡಿಗೈವೆನು || ಮಿಸುನಿಯೆ ತೊಡವಾಗಿ ಬಹುನಾಮವಾಂತಂತೆ | ಪಶುಪತಿಯ ಪರಾವತಾರರೆಂದೆನಿಸುವ ||ಪಲ್ಲ|| ಶಿವನ ಚಿದ್ಧರ್ಮವೇ ಶರಣರಾತ್ಮನಗೊಂಡ | ಶಿವತತ್ವದನುವ ಭೂಮಿಗೆ ಬಿತ್ತಿದ || ಶಿವನೇ ಮಾನುಷ್ಯದಿಂ ಮಾಯೆಯನಿಳಿಕೈದ | ಶಿವನ ರೌದ್ರಾವೇಶ ರಸಪೂರದೆ ಕರುಣಾದ ||೧|| ಲಿಂಗದಿಂ ನೃಪಗೆ ಸಾಕ್ಷಿಯಕೊಟ್ಟ ತನ್ನಿಷ್ಟ|ಲಿಂಗಂದಿಂ ಪೆರ್ಗೂಪವಗುಳಿಸಿದ|| ಲಿಂಗಕ್ಕೆ ಪ್ರತ್ಯಕ್ಷ ಮಣಿಸಿತ್ತ ಕರಪದ್ಮ | ಲಿಂಗದೆ ತನುವನಡಗಿಸುತೆ ಬಯಲಾದ ||೨|| ಮೃಡಬಲಿ ಪೂಗೊಂಡ ಸತಿಯಕೈಗಡಿದಿಟ್ಟ | ಮೃಡನಿಗೆ ಜಡೆಯನಲ್ ಸೊಡರೆತ್ತಿದ || ಮೃಡನಿಗೋಸುಗ ತನೂಜನನೆ ಬಾಣಸಗೈದ | ಮೃಡನನೇಳಿಸಿದಾತ್ಮ ಪಿತನ ಸಂಹರಿಸಿದ ||೩|| ಹರನನ್ನೆ ಹೊರಗೆಂದು

ಬೇಡೆ ಮತ್ತೊಳಕೈದ । ಹರನೆ ಬಾರೆನೆಲೊಲ್ಲೆ ನೆನುತಟ್ಟಿದ ॥ ಹರನಿಗಂ ವೀರಶೈವೋಪದೇಶವನಿತ್ತ । ಹರನ ಕೈಲಾಸಪುರವೆಲ್ಲಕೊಳ್ಗೊಂಡ ॥೪। ಈ ರೀತಿಯೊಳು ಮೋಘದಿಂ ಬಂದು ಪೊಳೆಯಿಂದೆ । ವಾರಿವಾರ್ಧಿಯು ಮತ್ತೆ ಬೆರೆಯುವಂತೆ ॥ ಶಾರೀರವಿಡಿದೈದಿ ನಟಿಸುತ್ತೆ ಶಿವಭಕ್ತಿ । ದ್ವಾರದಿಂ ಗುರುಸಿದ್ಧನೊಡನೈಕ್ಯರಾದಂಥ ॥೫॥

## ೨೮

ಮನವೆಂಬ ಮರ್ಕಟನ ತಡೆಯಲಾರೆನು ದೇವಾ । ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ ॥ಪಲ್ಲ॥ ಧರೆಯನೆಲ್ಲವನೊಂದೆ ಕೊಡೆಯಿಂದಲಾಳುವುದು ।ಗಿರಿಯ ಗುಹೆಯೊಳು ಕುಳಿತು ತಪವ ಮಾಡುವುದು ॥ ತರುಣಿಯರ ಕಂಕುಳೊಳು ಕೈಯಿಕ್ಕಿ ನಗಿಸುವದು । ಕರಿಯ ಮೇಲಂಬಾರಿಯಲ್ಲಿ ಮೆರೆಯುವದು ॥೧॥ ಅನುಭವದಿ ಜೀವೇಶರೈಕ್ಯವನು ತಿಳಿಯುವುದು । ಧನವ ದಶಲಕ್ಷವನುಗಳಿಸಿ ಹೂಣುವದು ॥ ಮನೆಯ ಮಕ್ಕಳ ಬಿಟ್ಟು ವಿರತಿಯಿಂ ಪೊರಡುವದು । ವನಜೋದ್ಭವಾಂಡ ಮೊಂದೊಂದನೆಣಿಸುವದು ॥೨॥ ಅರಿಗಳನು ಹಿಡಿದು ಹೆಡೆಮುಡಿಗಟ್ಟಿ ಹೊಸಗುವುದು । ಸುರಲೋಕಕೈದಿ ರಂಭೆಯೊಳು ರಮಿಸುವದು ॥ ಬರಿದೆ ನಿನೇಕಿನಿತು ಚೇಷ್ಟಿಸುವೆಯೆನೆ ಭುವಿಯೊ । ಳಿರುವ ಕೋತಿಗಳಾರ ಶಿಷ್ಯರೆಂಬುದು ॥೩॥ ಪಿಡಿವೆನೆನೆ ಮೊದಲೆ ಮುಮ್ಮಾರ ಹಾರಾಟಿಹುದು ! ಪೊಡೆವೆನೆನೆಲಾ ನುಡಿಯದಾರದೆಂಬುವದು ॥ ತುಡುಗ ದನವಿನ ಕೊರಳ ಗುದ್ದೆಯಂದದೊಳನ್ನ । ನೆಡೆವಿಡದೆ ಮೂಜಗದೊಳೆಳದಾಡುತಿಹುದು ॥೪॥ ಧರೆಯ ನಿಕ್ಷೇಪವನು ಕದ್ದೆಲ್ಲಿಗೋಡಿದರೂ । ಧರೆಯದಲ್ಲಲ್ಲಿ ಕಳ್ಳನ ಕಾಡುವಂತೆ॥ ಗುರುಸಿದ್ಧ ಎನ್ನ ಮನವಾವ ವಿಷಯಂಗಳೊಳಗೆರಗಲಲ್ಲೆಲ್ಲ ನೀಂ ಕಾಣಿಸದ ಬಿಡಿಸೈ ॥೫॥

## ೨೯

ಎಂತು ಸೈರಿಸಬಹುದು ಈ ಭವದ ಬಾಧೆಯನು । ಕಂತುಹರ ಜನಿಪುದನೆ ಸಾಕು ಮಾಡಭವಾ ॥ಪಲ್ಲ॥ ವಾಯು ಕರಣೇಂದ್ರಿಯಂಗಳು ವಿಷಯವಾಸೆಗಳು । ದಾಯಾದ್ಯರೆಂತೆನ್ನ ತಿಕ್ಕಿ ಮುಕ್ಕುವುವು ॥ ಕಾಯ ಗುಣವೆನಿಪ ಹಸುತೃಷೆನೋವುನಿದ್ರೆಗಳು।ನಾಯ್ಗಳಂತಡಿಗಡಿಗೆ ಮುತ್ತಿ ಮುಸುರುವವು॥೧॥ ಒಡಲಬಿಡದಾಪತ್ತು ಕೆಡಹಿ ಧರೆಯೊಳು ಕಾಡ । ಹೊಡೆಗಿಚ್ಚಿನಂತೆನ್ನ ಸುಟ್ಟು

ಸುರುಳಿಪುದು ॥ ಮುಡದಿ ಮಕ್ಕಳ ಮೇಲಣತಿಮುಮತೆಯುದು ಕಾಲ್ಗೆ । ತೊಡ ರ್ದ ಬಳ್ಳಿಯ ತೆರವೆ ಕಟ್ಟಿ ಕೆಡಹುವುದು ॥೨॥ ಜನರು ಕಪಿಯನು ಕುಣಿಪು ದಿದು ಸಹಜ ಧರೆಯೊಳಗೆ । ಮನವೆಂಬ ಕಪಿಯೆನ್ನ ಕುಣಿಸಿ ಕೊಸರುವುದು॥ ತನುವಿದಳಿದಳಿದುದಿಸಿ ರಾಜಾಜ್ಞೆಯಂತೆನ್ನ । ನನುದಿನವೊಳಿಹಪರಕೆ ಸುತ್ತಿ ಸುಳಿಸುವುದು ॥೩॥ ಅರಿವರ್ಗವೆಂಬುವೆಡೆವಿಡದೆನ್ನ ಮುರಿದೊತ್ತಿ । ಹರವರಿಸಿ ಹಗೆಯಂತೆ ಕೊಂದು ಕೂಗುವದು ॥ ಮೆರೆವ ತಾಪತ್ರಯವದವಗಹಿಸಿ ಬೇಸಗೆಯೊ । ಳುರಿವ ಬಿಸಿಲಂತೆನ್ನ ಕರಗಿ ಕೊರಗಿಪುದು ॥೪॥ ಏಳು ವ್ಯಸ ನಂಗಳೆನ್ನನೆ । ಕೋಳವಿಡಿದೊಡನೆ । ಕಾಳು ಸರ್ಪಗಳಂತೆ ಕಚ್ಚಿ ಕೀಳುವುವು॥ ಹೇಳಲೇನಕಟ ಶಿವಘೋ ಕಾಮಯಮರೆನ್ನ । ನಾಲೆಯಕಣೆಗಳಂತೆ ಹಿಂಡಿ ಹಿಚುಕುವುವು ॥೫॥ ಜರೆಮರಣವೆರಡೆನ್ನನೊಡನೊಡನೆ ಮೇಲ್ವಾ ಯ್ದು । ಹಿರಿಯ ಹುಲಿಯಂ ತಡರಿ ತಿಂದು ತೇಗುವುವು ॥ ಮರಹೆಂಬುದೆನ್ನ ಸುಜ್ಞಾನ ದೃಷ್ಟಿಯ ಮುಸಗಿ । ಪರೆದು ಗಾಢಾಂಧವೊಲು ಮುಚ್ಚಿ ಮುಸುಗುವುದು ॥೬॥ ಉಳಿವ ಬಾಧೆಗಳನಂತಂಗಳುಂಟವನೆಲ್ಲ। ವಳಿದು ಗುರು ಸಿದ್ಧನೊಡನೈಕ್ಯ ಪದವಿಯನಿತ್ತು ॥ ಅಳಬೇಡ ಮಗನೆ ನಾಸಹೆನು ನಿನ್ನೀ ಭವವ । ಕಳೆವೆನೆಂದಭಯವನೆ ಕೊಡು ಮಹಾದೇವ ॥೭॥

೩೦

ಪುರಹರಾ ನಿನಗಿನ್ನು ದಯೆ ಬಾರದೇ । ಪರಿಭವದೊಳು ಬಹು ಬಳಲ್ವೆ ನಲ್ಲಾ ॥ಪಲ್ಲ॥ ಬರಬಾರದತಿಹೀನ ಯೋನಿಗಳೊಳು ಬಂದ, । ಧರಿಸಬಾರದ ದೇಹಗಳನೆ ತೊಟ್ಟು ॥ ಸ್ಮರಿಸಲುಚಿತವಲ್ಲದಾಹಾರಗಳನುಂಡು । ತಿರುಗು ತಿರ್ಪುದ ನೀನೆ ಕಂಡುಕಂಡು॥೧॥ ಅಳುಪಬಾರದಗುರುದ್ವೈವದರ್ಥಕೆ ಸೋಲ್ತು। ಕೊಲಬಾರದಖಿಳ ಪ್ರಾಣಿಗಳ ಕೊಂದು ॥ ಗಳಿಸಬಾರದ ಲೋಕದಪವಾದ ಗಳಹೊತ್ತು ತೊಳಲುತಿರ್ಪುದ ನೀನೆ ಕಂಡುಕಂಡು ॥೨॥ ಮಾಡಬಾರದ ಪಾಪ ಗಳನೆ ಮೋಹಿಸಿ ಮಾಡಿ । ಕೂಡಬಾರದ ಕಾಮಿನಿಯರ ಕೂಡಿ ॥ ಆಡಬಾ ರದ ಪರದೂಷಣೆಗಳನಾಡಿ। ಝೋಡಿಯಪ್ಪುದ ನೀನೆ ಕಂಡುಕಂಡು ॥೩॥ ಎನಿ ತಿವನ-ಘವೆಸಗಿದರೂ ಎನ್ನನು ಬಿಟ್ಟು । ವನಿಗನ್ಯಗತಿಯಿಲ್ಲದುದರಿಂನಾನೆ॥ ಅನಿತ ನೋಡಿಸಿ ಮುಕ್ತಿಗುಡಬೇಕೆಂಬುವ ನಿನ್ನ । ಮನದಾಶಯುವ ನೀನೆ ಕಂಡು ಕಂಡು ॥೪॥ ಪರಿಪೂರ್ಣ ಗುರುಸಿದ್ಧನಾದ ನಾನೀಶನೀ । ಮೊರೆಯು

ನಾಲಿಸಿ ನಿಷ್ಕರುಣದೊಳಿನ್ನು || ಮರೆತಿರೆ ಭಕ್ತವತ್ಸಲನೆಂಬ ಬಿರುದೆನ್ನ ಮರೆವುದೆಂಬದ ನೀನೆ ಕಂಡು ಕಂಡು || ೫ ||

೩೧

ಸಿರಿಯು ಸತಿ ಸುತ ಹಿತರು ನಿಜವೆಂದು ನೆರೆನಂಬಿ | ಬರಿದೆ ಮೈಮರೆದು ಕೆಡದಿರು ಮಂದ ಮನುಜಾ ||ಪಲ್ಲ|| ಣ್ಣೆಯಿರುವತನಕ ದೀವಿಗೆಯುರಿವವೊಲು ಪೂರ್ವ | ಪುಣ್ಯವಿಹಪರಿಯಂತ ಸಿರಿಯಿರ್ಪುದು || ತೀರಿದ ಮರುದಿನಕೆ ನಿನ್ನಯ ಸಿರಿಯು | ಎಣ್ಣೆ ಮುಗಿದಿಹ ದೀಪದೊಲು ತಣ್ಣಗಹುದು ||೧|| ಒಂದು ಮರದೊಳಖಿಳ ಪಕ್ಷಿಗಳು ಸಂಜೆಯೊಳ| ಗೊಂದಿ ಬೆಳಗಿನೊಳಗಲಿ ಹೋಗುವಂತೆ || ತಂದೆ ತಾಯಣ್ಣ ತಮ್ಮರು ಸತಿಸುತರು | ಕಾಲ ಬಂದ ನಿಮಿಷಕೆ ನಿನಗೆ ಹೇಳದ್ಯೆದುವರು ||೨|| ವ್ರಣಕೆ ಮುಸುರುವ ನೊಣಗಳಂತೆ ನಿನ್ನನು ಜನರು ಹಣವಿರುವ ಪರಿಯಂತ ವೋಲೈಪರು || ಹಣವು ನಿನ್ನೊಳು ಮುಗಿದ ಘಳಿಗೆಯೊಳಗಾ ಜನರೆ| ಹೆಣವ ಕಂಡಂತೆ ದೂರಕೆ ಹೋಗುತಿಹರು ||೩|| ನಿನ್ನಂಗಕೆಂದ ನಿನಗಿನ್ನು ಹಿತವಾವುದೀ ನಿನ್ನಂಗವೇ ನಿನ್ನನಗಲ್ವುದೆನಲು || ಅನ್ಯವಹ ಸಿರಿಯು ಸತಿ ಸುತ ಹಿತರು ನಿಜವಂತಿ | ನ್ನಿದನು ತಿಳಿದು ಮೋಹಿಸದಿರಲೇ ಮರುಳೇ ||೪|| ಗುರುಚಾಪಗಂಧರ್ವ ಪುರಗಳಿಂ ಪುಸಿಯಾದ | ಸಿರಿಮುಖ್ಯಪರಿಕರದೆ ಮೈಮರೆಯದೆ || ಗುರುಸಿದ್ಧನಂಘ್ರಿಸಂಕಜವ ಮನದೊಳು ಭಜಿಸಿ | ಪರಮುಕ್ತಿಯನು ಪಡೆದು ಸುಖಿಯಾಗು ಕಂಡ್ಯಾ ||೫||

೩೨

ಹೆಣ್ಣಿಗಿಚ್ಛೈಸುವರೇ ಮೂಢಾ|ಇದನು ಕಣ್ಣುಕಿವಿಮೈಮನಗಳಿಂ ಸೋಂಕಬೇಡಾ ||ಪಲ್ಲ|| ತಾಯಾಗಿ ಮೊದಲೇ ಹಡೆದಿಹುದು | ಮೇಲೆ ಜಾಯೆ ಎಂದೆನಿಸಿ ಕಾಮದೊಳು ಕೆಡಹುವದು || ಕಾಯದೊಳು ಜನಿಸಿ ಸುತೆಯಹುದು | ಇಂತು ಮಾಯೆಯೇ ನಿನ್ನ ಬಹು ವಿಧದಿ ಕಾಡುವದು ||೧|| ಹಿತಶತ್ರುವಾಗಿ ಹೊಂದುವದು | ನಿಮಿಷ ರತಿಗೊಟ್ಟು ನಿತ್ಯ ಮುಕ್ತಿಯನೆ ಸೆಳೆಯುವದು || ಕ್ಷಿತಿಯ ಪೂಜ್ಯತೆಯ ಕೆಡಿಸುವದು | ಮುಂದೆ ಶತಜನ್ಮಗಳಿಗೆ ಹೊಣೆಯಾಗಿ ನಿಲ್ಲುವದು ||೨|| ಬಗೆಯೆ ತನುವೆಲು ನರವು ಖಂಡ | ವದರೊಳಗೆ ಪಾಯು ರಂಧ್ರವದು ಕಿಸುಕುಳದ ಹೊಂಡ || ಭಗವೆಂಬುವದು ಮೂತ್ರಭಾಂಡ | ವದ

ಕವಗಡಿಸದೆ ನಿನಗೆ ನಿಜಸುಖವಿಲ್ಲ ಕಂಡ್ಯಾ ||೩|| ಒಸೆದು ಪಾಲಿಯನು ಕೊಲಿಸಿಹುದು | ಹಾಂಗೆ ಹೆಸರು ಮಾತ್ರದೊಳು ಕೀಚಕನನಳಿಸಿಹುದು | ದಶಕಂಠನಸುವ ಕಳಿಸಿಹುದು | ಇಂದ್ರ ಶಶಿಗಳಂಗದೆ ಭಗಕ್ಷಯಗಳೆಸಗಿ ಹುದು ||೪|| ವರಸೆವಾಯಗಳನಳಿಸಿಹುದು | ಸೋಂಕಿದರ ಮೇಲೆ ಪಾತಕದ ಹೊರೆಯ ಹೊರಿಸುವದು|| ನರಕದರ ಮನೆಯೊಳಿರಿಸುವದು ನವ್ಮ ಗುರುಸಿದ್ಧ ನಡಿಗವರ ದೂರವೆನಿಸುವದು ||೫||

೩೩

ತನ್ನೊಳಗಿಹ ತೀರ್ಥ ಕ್ಷೇತ್ರವನರಿಯದೆ | ಸುಮ್ಮನೆ ತಿರುಗುತಿಪ್ಪರು ಮೂಢ ಜನರು ||ಪಲ್ಲ|| ಈಡೆಯೆ ಯಮುನೆ ಪಿಂಗಳೆಯೆ ಗಂಗೆಯು ಬ್ರಹ್ಮ| ನಾಡಿ ಎಂಬುದೇ ಸರಸ್ವತಿಯು ಮೂರೊಂದು | ಗೂಡಿ ಜೆರೆದ ತ್ರಿಕುಟವೇ ಸಂಗಮವು ಮಿಕ್ಕ | ನಾಡಿಗಳವು ಸರ್ವ ಪುಣ್ಯ ತೀರ್ಥಗಳು ||೧|| ಶಿರವೇ ಶ್ರೀಗಿರಿ ಕರ್ಣ ವದುವೇ ಗೋಕರ್ಣವು| ಕರಗಳೇ ಕಾಂಚಿ ಕುಚವೇ ಕುರು ಕ್ಷೇತ್ರ || ಉರವೇ ಉಳಿವೆ ಭವ್ಯ ಭ್ರೂಮಧ್ಯವದು ಕಾಶಿ | ಪುರವು ಕಂಠವೇ ನೀಲಕಂಠವೆನಿಪುದು ||೨|| ಒಳಗಿಂತು ಪರಿವ ತೀರ್ಥದೆ ಮಿಂದು ತ್ರಿಮಲವ ತೊಳದೀ ಕ್ಷೇತ್ರಗಳ ನೊಂದೊಂದನೇ ಹೊಕ್ಕು || ಸುಳಿದಲ್ಲಿ ಗುರುಸಿದ್ಧನಹ ನಾದ ಕಳೆಬಿಂದು | ಗಳ ಲಿಂಗ ತತಿ ಎಂದು ಭಜಿಪುದ ಮರೆದು ||೩||

೩೪

ತೇರು ಸಾಗಿತವ್ಮ ನೋಡಿರೆ | ಈ ದೇಹವೆಂಬ ತೇರು ಸಾಗಿತವ್ಮ ನೋಡಿರೆ || ತೇರು ಸಾಗಿತವ್ಮ ನೋಡಿ | ಸಾರ ಮುಕುತಿ ಸತಿಯರೆಲ್ಲ | ಪಾರಮಾರ್ಥತತ್ವದೊಳೆ ವಿಚಾರವೆಂಬ ಬೀದಿಯಲ್ಲಿ ||ಪಲ್ಲ|| ಕಾಲೆ ಎರಡು ಗಾಲಿಯಾಗಿವೆ | ಜಂಘೆಗಳವಕ್ಕೆ ಕೀಲಿನಚ್ಚಿನಂತೆ ತೋರಿವೆ | ಈ ತೊಡೆಗಳೆರಡು ಮೇಲು ಮುಖದ ಕಂಭವಾಗಿವೆ || ಆಧಾರ ಮುಖ್ಯವೇಳು ಚಕ್ರವೆಸೆವ ತನ್ನೊಳೇಳು | ನೆಲೆಗಳಾಗಲವರ ಮೇಲೆ ತೋರ್ಪ ಮಸ್ತಕವೇ | ವಿಲೋಲ ರತ್ನಕಳಸವೆನಿಸಿ ||೧|| ಕರಗಳೆರಡು ಮದನ ತೋಳ್ಗಳು | ಮೇಲಿರುವ ಭುಜದ ಸಿರಗಳೆರಡು ಹೊಳೆವ ಧ್ವಜಗಳು | ನೇತ್ರಂಗಳೆರಡು ಮೆರೆವ ನೀಲದರ್ಪಣಂಗಳು|| ಉಜ್ವಲಿಸುತಿರ್ಪ ಶರೀರ ಕಾಂತಿಯುದಕೆ ಸುತ್ತ| ಲಿರುವ ಪಟಗಳಾಗಿ ತೋರೆ ನೆರೆ ಸುಷುಮ್ನ ನಾಡಿಯೆಂಬ || ಬಿರಿಯ ಬಲವ ಜಗ.ಪಿ

ನಿಂದ ||೨|| ತನುಗುಣಂಗಳೆಲ್ಲ ಪ್ರಜೆಗಳು | ಮುಂಬರಿವ ಬುದ್ಧಿ ಮನ ಗಳೆಂಬುವೆರಡು ಮಿಳಿಗಳು | ವೈಖರಿಯನುಡಿಗಳಿನಿತಿವೆಲ್ಲ ವಾದ್ಯರವಗಳು|| ಸಂಭ್ರಮದಿ ಬಂದು ಮಿನುಪ ಹೃದಯಕಮಲವೆಂಬ ಕನಕ ಪೀಠದಗ್ರದಲ್ಲಿ ಚಿನುಮಯಾತ್ಮ ಶ್ರೀ ಗುರುಸಿದ್ಧ | ನನುವಿನಿಂದೆ ಮೂರ್ತಿಗೊಳಲು ||೩||

೩೫

ಬೆರೆಯಬಾರದೆ ತಿಳಿದು ಬೆರೆಯಬಾರದೆ | ಮರೆದು ಬಾಹ್ಯವನ್ನುತನ್ನ ಕರದ ಖಂಡ ತೇಜದೊಡನೆ ||ಪಲ್ಲ|| ತಿಳಿವೆನಿಸುವ ಸುರಭಿಗೂಡಿ | ನಳಿನಳಿ ಸುವ ವಿಕಚ ಹೃದಯ || ನಳಿನದಮಳ ಕರ್ಣಿಕೆಯೊಳು | ಬೆಳಗು ಇಷ್ಟಲಿಂಗ ದೊಡನೆ||೧|| ಪರಿವ ಗಂಗೆ ಯಮುನೆ ಎರಡು | ಬೆರೆದ ಸಂಗಮ ಸ್ಥಳದೊಳ| ಗಿರುವ ಗಗನ ಗಿರಿಯ ತುದಿಯೊ | ಳುರಿವ ಪ್ರಾಣಲಿಂಗದೊಡನೆ ||೨|| ಮಹಿತ ಶ್ರೀ ಗುರುಸಿದ್ಧನೊಲಿದು | ವಿವರಿಸುವ ಸುಷುಮ್ನ ನಾಡಿ|| ಕುಹರ ದಗ್ರದಚಲಸರಸಿ | ರುಹದ ಭಾವಲಿಂಗದೊಡನೆ ||೩||

೩೬

ಏಕೆ ಯಾತ್ರೆಯ ಮಾಡುತಿರ್ಪರಲ್ಲೇನಿಹುದು | ಸಾಕುಬಿಡು ತಮ್ಮೊಳೀ ಗುಣಗಳಿರುತಿರಲು ||ಪಲ್ಲ|| ಪರನಿಂದೆ ಪರವಧೂಸಂಗ ಕುಟಿಲ ಕುಯುಕ್ತಿ | ಪರನಿಂದೆ ಕಪಟ ನಿರ್ದಯೆ ಕಠಿಣ ವಚನ || ಗುರುನಿರಾಕರಣೆ ಮದಮೋಹರಾಗದ್ವೇಷ | ದುರಿತಾದಿ ದುರ್ಗುಣಂಗಳು ತಮ್ಮೊಳಿರಲು ||೧|| ಸತ್ಯ ಸನ್ಮಾರ್ಗ ಶಮೆದನೆ ಶಾಂತಿ ಗುರುಭಕ್ತಿ | ತತ್ವವಿತರಣೆ ವಿದ್ಯೆ ವಿನಯ ದಯೆ ಧರ್ಮ || ನಿತ್ಯಕರ್ಮವಿವೇಕ ವಿರತಿ ಜಪ ತಪ ಯೋಗ | ವಿತ್ಯಾದಿ ಸದ್ಗುಣಂಗಳು ತಮ್ಮೊಳಿರಲು ||೨|| ತಿಳಿಯಲೀಗುಣಗಳೊಳಗೊಂದೊಂದೆ ಶತಯಾತ್ರೆ | ಗಳ ಪುಣ್ಯ ಫಲವ ತವಿಸುವುವೀವುವೆನಲು || ಕಳೆದಿಡುತ್ತಾದಿ ಗುಣಗಳನಂತ್ಯ ಗುಣವಿಡಿದೊ | ಡೊಲಿವನೀ ಗುರುಸಿದ್ಧನೆಂಬುದನು ಮರೆದು ||೩||

೩೭

ಅಧಿಕವಹ ಸಕಲ ಗುಣಗಳನಿಲ್ಲಿ ವರ್ಣಿಸುವೆ | ನಧಿಕರರಿದಾಚರಿಸಿ ನಿಜಮುಕ್ತರಹುದು ||ಪಲ್ಲ|| ಸಕಲ ಪಾಪಂಗಳೊಳು ಪರನಿಂದೆಯದಧಿಕ | ಸಕಲ ಪುಣ್ಯದೊಳನ್ಯಪೋಷಣೆಯದಧಿಕ||ಸಕಲದುರ್ಗುಣಂಗಳೊಳು ಲೋಭ

ವೆಂಬುವಧಿಕ। ಸಕಲ ಗುಣಂಗಳೊಳು ವಿತರಣವವಧಿಕ॥೧॥ಅಖಿಳ ಲಾಘವಗದೊಳು ದೇಹಿ ಎಂಬುವುದಧಿಕ।ಅಖಿಳ ಗೌರವದೊಳಗಯಾಚನೆಯುದಧಿಕ+ ಅಖಿಳವಹ ತಪಗಳೊಳು ಸತ್ಯವೆಂಬುವುದಧಿಕ । ಅಖಿಳ ತೀರ್ಥದ ವಿಮಲ ಮಾನಸವವಧಿಕ ॥೨॥ ಎಲ್ಲ ಬಂಧನಗಳೊಳು ಭವಬಂಧನವದಧಿಕ । ಎಲ್ಲ ವಿಜಯುದೆ ಕರಣಗಳ ವಿಜಯುವಧಿಕ ॥ ಎಲ್ಲ ಜನ್ಮಂಗಳೊಳು ಮನುಜ ಜನ್ಮವಧಿಕ । ಎಲ್ಲ ಸುಖಂಗಳೊಳು ವೈರಾಗ್ಯ ಸುಖವಧಿಕ ॥೩॥ ಸರ್ವಾಸನಂಗಳೊಳು ಸಿದ್ಧಾಸನವದಧಿಕ । ಸರ್ವ ಮುದ್ರೆಗಳೊಳು ಖೇಚರಿಯುದಧಿಕ ॥ ಸರ್ವ ನಾಡಿಗಳೊಳು ಸುಷುಮ್ನನಾಡಿಯುದಧಿಕ ಸರ್ವ ಲಕ್ಷದಿ ಪೂರ್ಣ ಲಕ್ಷ್ಯವತ್ಯಧಿಕ ॥೪॥ ನಿಖಿಲವಹ ಗುಣಗಳೊಳು ಗುರುಸಿದ್ಧನತ್ಯಧಿಕ । ನಿಖಿಲ ವಿದ್ಯದೆ ಬ್ರಹ್ಮ ವಿದ್ಯೆಯುತ್ಯಧಿಕ ॥ ನಿಖಿಲ ಯೋಗವೆ ರಾಜಯೋಗವಹುವತ್ಯಧಿಕ । ನಿಖಿಲ ಪದಗಳೊಳು ಮುಕ್ತಿಪದವಿಯುತ್ಯಧಿಕ ॥೫॥

## ೩೮

ಹೊರಗೆ ಹಿರಿಯುರಾಗಿ ನಿಜವನರಿಯುವವರೆ ಕಿರಿಯುರೊ । ಳಗನರಿದು ಕಿರಿಯುರಾದೊಡವರೆ ಜಗಕೆ ಹಿರಿಯುರು ॥ಪಲ್ಲ॥ ನೂರು ವರುಷ ಬಾಳ್ದ ತತ್ವ । ಸಾರವರಿಯದೆ ಯುಮನ ಪುರದ। ದಾರಿಯುಲ್ಲಿ ಪೊದಿಸಿ ಕೊಂಬುವವರೆ । ಕಿರಿಯುರು ॥ ಮೂರು ವರುಷವಾದೊಡೇನು । ಪರಮಾರ್ಥವರಿದು ಭವದ । ಬೇರು ಕಿತ್ತು ಬಿಸುಡಬಲ್ಲೊಡವರೆ ಹಿರಿಯುರು ॥೧॥ ದೊಡ್ಡ ಹೊಟ್ಟೆ ದೀರ್ಘ ದೇಹ । ಗಡ್ಡವಿರ್ದ ಮಾಯೆಭ್ರಮೆಯು । ಜಿಡ್ಡು ತೊಳೆಯುಕೊಳ್ಳಲರಿಯುದವರೆ ಕಿರಿಯುರು ॥ ಗಿಡ್ಡರಾದೊಡಾಗಲರಿವಿ । ಗಡ್ಡಲಾಗಿ ಬೆಳೆದ ಮರವೆ । ಯೊಡ್ಡ ಮುರಿದು ತೆರಹ ಮಾಡುವವರೆ ಹಿರಿಯುರು ॥೨॥ ನೆಲವನೆಲ್ಲ ಭುಜದ ಬಲವೆ । ಗೆಲಿವ ತನ್ನ ಮರೆದ ವಿಸ್ಮೃತಿ । ಯುಲಗಿನಿಂತದಲ್ಲೆ ಕೊರಗುವವರೆ ಕಿರಿಯುರು ॥ ಬಲುಹುಲೀಕವಿಂವೆ ಕರ್ಮ । ಮಲಗಳುಡುಪ ನುಳಿದು ಮುಕುತಿ । ಲಲನೆಯೊಡನೆ ಸುಖಿಸಿ ಸೋಲುವವರೆ ಹಿರಿಯುರು ॥೩॥ ಸಕಲ ವೇದ ಶಾಸ್ತ್ರ ತರ್ಕ । ಮುಖರರಾಗಿ ನಿಜವನರಿವ । ಯುುಕುತಿಯುರತು ಕಾಲಕೀಡಾಗುವರೆ ಕಿರಿಯುರು ॥ ಮುಖದೊಳೊಂದಕ್ಷರವು ತೋರ । ದಖಿಳ ದಂತ್ಯವರಿದು ಪೂರ್ಣ ಸುಖಿದಿ ಮುಳುಗಿ ಮೂರ್ಛೆ ಹೋಗುವವರೆ ಹಿರಿಯುರು ॥೪॥ ಕರದೆ ದಂಡ ಯೋಗವಟ್ಟೆ । ಸಿರದೆ ಜಡೆಗಳಿರ್ದ ಜೀವ ।

ಪರಮಶೈಕ್ಯವರಿಯದಿದ್ದೊಡವರೆ ಕಿರಿಯರು || ಕುರಿಯ ಕಾಯುತಿರ್ದೊಡಿರಲಿ |ಪರಮ ಶ್ರೀ ಗುರುಸಿದ್ಧನೊಡನೆ | ಬೆರೆದು ಬ್ರಹ್ಮವಾಗಬಲ್ಲೊಡವರೆ ಹಿರಿಯರು ||೫||

೩೯

ನಿಟಿಲಾಕ್ಷನ ಭಜಿಸೋ ಹೇ ಮನುಜಾ ನಿಟಿಲಾಕ್ಷನ ಭಜಿಸೋ ||ಪ|| ಕುಟಿಲ ಪ್ರಪಂಚದ ಚಟುವಳಿದನುದಿನ ||ಅನುಪಲ್ಲ|| ಜರೆಯೊಳು ಪರರಿಗೆ ನೆರೆಹಂಗಾಗುತೆ | ಮರಣವಾಗದೆ ಸುಖದಿರುವಾಗಲೆ ನೀ ||೧|| ಈ ಶಿವ ಸಮಯ ಮಾನಿಸ ಜನ್ಮವಿ | ನ್ನೇಸುಕಾಲಕೆ ಸಿಗದೀ ಸಮಯದೆ ನೀ |೨| ಜಡಮತಿಗಳ ನುಡಿಗಡಣಕೆ ನೀ ಕಿವಿ | ಗೊಡದಾ ಘನಾಮಠದೊಡೆಯನ ಬಿಡದೇ ನೀ ||೩||

೪೦

ಬಸವೇಶಾ ಪಾಲಿಸೋ | ಶಶಿಭೂಷಾಕಾರನೆ ||ಪಲ್ಲ|| ಲೋಕಪಾವನ ಪಿನಾಕಿ ಭಕ್ತಗಣ ! ಶೇಖರ ಪರಮ ದಯಾಕರ ಗುಣ ||೧|| ನೆನೆದಾಕ್ಷಣ ಮುಕುತನ ಮಾಡುವ | ನಿಮ್ಮಘನನಾಮವನುದಿನವೋದಿಸಿ ||೨|| ದ್ವೇಷ ರಹಿತ ಸರ್ವೇಶ ಘನಮಠ | ನಿವಾಸಾ ನಿಮ್ಮ ವರದಾಸನೆನಿಸಿ ||೩||

೪೧

ಶ್ರೀಗುರು ಬಸವಲಿಂಗಾಯನಮೋ | ನಿಗಮಾಗಮನುತ ಜಗದೀಶಾ ಭೋ ||ಪಲ್ಲ|| ಕಾರಣ ಕಾರಣ ಕಾರುಣ್ಯಾಕರ | ಸಾರುಷಟುಸ್ಥಲಧೀರ ಭೋ ||೧|| ಮಂಗಲನಾಮ ಚಿದಂಗ ಪರಾತ್ಪರ | ಜಂಗಮಲಿಂಗ ಸುಸಂಗ ಭೋ ||೨|| ಇಷ್ಟಪ್ರದಾಯಕ ವಿಶಿಷ್ಟ ವೀರಮಠ | ಶ್ರೇಷ್ಠ ಶ್ರೀಘನಮಠದಿಷ್ಟ ಭೋ ||೩||

೪೨

ಸಮಾನ ದೈವವದಾರೋ ಬಸವ ನಿನ್ನ | ಸಮಾನದೈವವದಾರೋ || ಸುಮಾನ ಶಿವಮತಾಭಿಮಾನ ನಿಧೆ ನಿನ್ನ ||ಪಲ್ಲ|| ಸದಾಸುಕವಿನುತ ಪದಾಬ್ಜ ವರದ| ಸದುದಾರ ಪರಮ ಸುಚಿದಾಂಬುನಿಧೆ ನಿನ್ನ ||೧|| ಗಣಾಧಿಪತೆ ಸುರ ಗಣಾಳಿವರಸುತ | ಪ್ರಣಾಮನಿಜವಾಹನ ಮಹಿಮ ನಿನ್ನ ||೨|| ಪುರಾಂ

ಹೃದಯದಿ ವಿರಾಜಿಸುತಲೀ । ಧರಾತಲದೊಳಿರುವರ ಪ್ರೋಷಿಸುವೆ ನಿನ್ನ॥೩॥ ಪ್ರಸಾದತನುಗುರು ಪ್ರಸಾದ ಮನ ಶಿವ । ಪ್ರಸಾದ ಚರ ನಿಜ ಪ್ರಸಾದ ಮಯ ನಿನ್ನ ॥೪॥ ಘಟಾದಿ ಗುಣವನ ಕುಠಾರವರಘನ । ಪತಾಧಿಪತಿ ನಿಶ್ಚಟಾದಿ ಬಸವ ನಿನ್ನ ॥ ೫ ॥

೪೩

ರುದ್ರಾರತಿ ಪಿಡಿದೆತ್ತಿರಿ ತೋಂಟದ ಸಿದ್ಧಲಿಂಗನಿಗೆ । ಭವಗೆ । ಶ್ರದ್ಧೆಯಿಂದಘವಿರುದ್ಧಗೆ ಪರಮಪ್ರಬುದ್ಧಾರ್ಚಿತ ಪದಗೆ ಹರಗೆ ॥ಪಲ್ಲ॥ ನಿತ್ಯ ನಿರಂಜನ ನಿರುಪಮ ನಿರ್ಗುಣ ತತ್ವಾಕಾರನಿಗೆ ಭವಗೆ । ಸತ್ಯಜ್ಞಾನವಿರಾಗ ಭಕ್ತಿ ಭಾವೋತ್ತರೋತ್ತರಗೆ ಹರಗೆ॥೧॥ ಬಸವ ಪುರಾತನರನುಮತಿಯಿಂದು ದಯಿಸಿದ ಜಾತನಿಗೆ ಭವಗೆ । ವಸುಮತಿಶಿಷ್ಯರಿಗಸಮನುಭವವನು ವಶವಾಗರುಹಿದಗೆ ಹರಗೆ ॥೨॥ ಆರು ಮೂರು ನಾಲ್ಕೀರೈದೈದಕೆ ದೂರವಾದನಿಗೆ ಭವಗೆ । ಸಾರವೀರ ಸುವಿಚಾರ ಭಕ್ತ ಸಂಚಾರನಾದನಿಗೆ ಹರಗೆ॥೩॥ ಹಮ್ಮು ಬಿಮ್ಮಳಿದ ಚಿನ್ಮಯ ಷಟಸ್ಥಲ ಬ್ರಹ್ಮಾಚಾರ್ಯನಿಗೆ ಭವಗೆ।ಮರ್ಮಾದಿ ತನುಗುಣ ಧರ್ಮವಳಿದ ಪರಬ್ರಹ್ಮ ಮೂರುತಿಗೆ ಹರಗೆ ॥೪॥ ಭೂರಿಪದಂಗಳ ಹಾರದಮಹಿಮಾ ಪಾರಾವಾರನಿಗೆ ಭವಗೆ । ಧೀರ ಘನ ಮಹೋದ್ಧಾರಶರಣಮಂದಾರ ವೀರನಿಗೆ ಹರಗೆ ॥೫॥

೪೪

ಬಸವರಾಜ ಪಾಲಿಸಯ್ಯ ಶಶಿಧರಾವತಾರ । ಅಸಮಮಹಿಮಾಗಾರ ಭಕ್ತಿ ಕುಶಲ ಭವವಿದೂರ ॥ಪಲ್ಲ॥ ಹಿಂದೆ ನಾನಾ ಯೋನಿಗಳೊಳು । ಬಂದು ನೊಂದೆ ಬಹಳ ಈ ॥ ದಂದುಗವನು ಬಿಡಿಸಿ ನಿಮ್ಮ । ಕಂದನೊಲವಿರಳ॥೧॥ ಜ್ಞಾನಹೀನನಾಗಿ ವಿಷಯ । ಕಾನನದೊಳು ಪಾರಿ ನಾ॥ ಕಾಣದೆ ತಿರುಗಿದೆನು । ನಿಮ್ಮ ನೂನ ಪಥವ ತೋರಿ ॥೨॥ ಶ್ರೇಷ್ಠ ಘನಮಹೇಶ ಗುಣಗಳಷ್ಟ ಮುಕ್ತಿ ಮೂಲ ನಿಜ । ಸ್ಪೈಷ್ಟೆಯುತ್ತು ಕರ್ಮವನ್ನು ಸುಟ್ಟ ಪರಮ ಜಾಲ ॥೩॥

೪೫

ಎಲ್ಲಿ ಭಕ್ತಿಯುದೆಲ್ಲಿ ಮುಕ್ತಿಯುದೊ । ಈ ಸೂಳೆಮಕ್ಕಳಿಗೆಲ್ಲಿ ಭಕ್ತಿಯು ದೆಲ್ಲಿ ಮುಕ್ತಿಯುದೊ ॥ ಎಲ್ಲಿ ಭಕ್ತಿಯುದೆಲ್ಲಿ ಮುಕ್ತಿಯೊ ಕಳ್ಳಹಾದರಗಿತ್ತಿ

ಯಾಪರಿ । ಕುಲ್ಲತನದಲಿ ಚರಿಸಿ ಶಿವಪದವೆಲ್ಲಿ ಕಾಣದೆ ಸಾವುತಿಹರಿಗೆ ॥ಪ॥ ಒಳ್ಳೇ ನಾಗರ ಹಾವು ಹಿಡಿತಂದು ಗಾರುಡಿಗನಂಗಳ । ದಲ್ಲಿ ಭಲರೇ ಭಲರೇ ಭಲರೆಂದು ಆಡಿಸುತಮಿದಕಿಷ್ಟಿಲ್ಲಿ ಹಾಲೆರಿರವ್ವಯಯೆಂದು ಬೇಡಿದರೆನವ್ಕ॥ ಲ್ಲಿಲ್ಲ ಇಲ್ಲಿಂದಾಚೆಗ್ಹೋಗೆಂದು ಪಳಿಯುತ್ತ ಭ್ರಷ್ಟರು । ಬೆಲ್ಲವಾಕಳಹಾಲು ನಾರಿಯರೆಲ್ಲ ಸಂಭ್ರಮದಲ್ಲಿ ಪಿಡಿಯುತ । ಕಲ್ಲನಾಗರ ಮೇಲೆ ವ್ಯರ್ಥದಿ ಚಲ್ಲುತಿಹ ಪಾಪಾತ್ಮರಿಗೆ ಮತ್ತೆಲ್ಲಿ ॥೧॥ ಉಣವ ಜಂಗಮದೇವರೈತಂದು ಹಸಿವೆನಲು ಮುಂದಿನ । ಮನೆಗೆ ಹೋಗಿಲ್ಲೇಕೆ ನಿಂತೆಂದು ಪಳಿಯುತ್ತೆ ಸಕ್ಕರಿ । ಕಣಕ ಮುಂತಾದವನು ಬಲಿತಂದು ತೀರ್ಥಾರ್ಥಿಯೊಳು ಥಾ ॥ ರುಣಿಯ ತಿರುಗುತ ಬಳಲಿ ತಾವಂದು ಪರಿಭ್ರಮಿತರಾಗುತೆ । ಕಣಿತೆವಂ ಮಣ್ಣುಳ್ಳ ಗಿರಿ ಕಾನನ ಗುಹಂಗಳ ನರಸಿ ಕಷ್ಟದಿ । ಉಣದ ಕಲ್ಲಿಗೆ ಅಟ್ಟ ನೀಡುವ ಬಣಗುಮಾನವ ಪಶುಗಳಿಗೆ ॥೨ ಂದು ಒಂದೊತ್ತೆಂದು ಕಲ್ಪಿ ಸುತೆ ನೈರರ್ಥ ಪ್ರಾಣನ । ಕೊಂದು ಮಹಾತ್ಮ ದ್ರೋಹವಾರ್ಜಿಸುತೆ ಆ ವೇಳೆಯೊಳು ಹಿರಿ।ಹಂದಿಯಾಪರಿ ಮಲವ ಭುಂಜಿಸುತೆ ಎನ್ಮೊಳಗೆ ಹಸು ಹೋ ॥ ಯ್ತೆಂದು ದುರ್ಮೋಹದಲಿ ಹರ್ಷಿಸುತೆ ಅಕಟೀ ಭವಿಗಳು । ಕಂದು ಗೊರಳನ ಭಕ್ತಿಜ್ಞಾನಾನಂದರಸ ಸ್ಥಿರವಾಗಿಯುಂ ಮುದದಿಂದ ಕಾಣದೆ ಸಂಶಯದಿ ಬಹುದಂದುಗಕ್ಕೊಳಗಾದ ಹೊಲೆಯರಿಗೆಲ್ಲಿ ॥೩॥ ಮತ್ತೆ ನಾಗರ ಪಂಚಮಿಯಲ್ಲಿ ಜನರೆಲ್ಲ ಹಾಳ ಹುತ್ತು ಹುಡುಕುತ ಹೋಗಿ ತಾವಲ್ಲಿ ನಾಗಪ್ಪ ಎಂದೊದರುತ್ತ ಗಲ್ಲವ ಬಡಿದುಕೊಂಡಲ್ಲಿ ಇಷ್ಟಾರ್ಥಗಳ ಬೇ ॥ ಡುತ್ತಲರಿಷಣದಾರ ಕೈಯಲ್ಲಿ ಕಟ್ಟಿರುವವರುಗಳ । ಚಿತ್ತ ವೃತ್ತಿ ಪರೀಕ್ಷೆ ಗಾ ಹೆಡೆಯೆತ್ತಿಯಾಡಲ್ಕೆವ್ವ ನಾವಿ । ನೈತ್ರಪೋಡಲಿ ಎಂದು ಕಲ್ಮರನೆತ್ತಿ ಹಾಕೆಂದೆಂಬ ಹೊಲೆಯರಿಗೆಲ್ಲಿ ॥೪॥ ಉಪಮವರಿದುಪವಾಸಿಯಾಗದೆ ಅತಿ ಯಾಸೆ ಬಡುತಿಹ । ಚಪಲ ಗುಣವನು ಕೆಟ್ಟು ಪೋಗದೆ ಕ್ಷುತ್ ತೃಷೆಯು ನಿದ್ರೆಯು । ನಿಪ ನಿರೋಧವನೆಲ್ಲ ನೀಗದೆ ಕರ್ಮಂಗಳೆಲ್ಲವ ॥ ನಪಹರಿಸಿ ನಿಶ್ಚಿಂತರಾಗದೆ ಈ ಪಾಪಿಗಳ್ಳರು । ಅಪರಿಮಿತ ಶ್ರೀ ಘನಮಹೇಶನನುಪಮ ವರಿಯದೆ ಕಂಡಕಂಡದ । ಉಪವಸಂಗಳ ಮಾಡುತಿಹ ಈ ತಪನ ಜಾತನ ಕುರಿಯ ಮರಿಗಳಿಗೆಲ್ಲಿ

೪೬

ಶಿವನಾಮಾಮೃತರಸವ ಬೇಗದಿ ನೋಡಿ ಶಿವನಾಮಾಮೃತರಸನೆ ।
ಸಾವಧಾನದಿಂದ ಜೇಡಿಕೊಂಡೆ ಕಾಪದೀಗ ॥ಪಲ್ಲ॥ ನಾನೆಂಬ ಯೋಗಿಯು
ತಾನೊಂದು ನುಡಿದನು । ಹೀನ ನರಕದೊಳು ಬಿದ್ದ ಜೀವಿಗಳಿದ್ದು ॥೧॥
ನತ್ತ್ರೀಂದ್ರ ಜೋಗನು ಪತ್ಯಾನು ಶಿವಮಂತ್ರ । ಪತ್ಯಾದರದಿ ತಾಂ ನುಡಿದು
ಶಿವನೈದಿಡನು ॥೨॥ ಲೇಸಾದ ಜಗದೊಳ್ ವಾಸ ಶ್ರೀ ಘನಮಠ ।ವಾಸಾನು
ದಾಸನಾಗಿ ಭಾಸುರ ವಿಲಾಸದಿಂದ ॥೩॥

೪೭

ನುಡಿಯುಡಿದಣ್ಣಾ ಜಡ ಮನುಜರೊಳ್ ನುಡಿಯುದಿರಣ್ಣಾ । ನುಡಿಯು
ದಿರಣ್ಣಾ ಈ ಪೃಡವಿಯೊಳಗಿದಿನ ಧೃಡಭಕ್ತರಲ್ಲದರೊಡನೆ ಸಾವಿರಕೊಮ್ಮೆ
ನೀ ॥ಪಲ್ಲ॥ ಹಿತವೆಂದು ತಿಳುಹಲಹಿತವಾಗಿ ಗ್ರಹಿಸುವ ಮತಿಹೀನರೊಡನೆ
ಕ್ಷಿತಿಲಕ್ಷ್ಯಕೊಮ್ಮೆ ನೀ ॥೧॥ ನಿಜ ನಡೆನುಡಿಗಳ ತ್ಯಜಿಸುತೀ ಭುವಿಯೊಳು
ಕುಜನರೆನಿಪರೊಳ್ ನಿಜಕೋಟಿಗೊಮ್ಮೆ ನೀ ॥೨॥ ಘನಮಠವಾಸನ ಗಣ
ವರರಲ್ಲದ ಮನುಜಾಧಮರೊಳೊಸೆದನು ಭವದೆಂದೆಂದು ನೀ ॥೩॥

೪೮

ದೂಷಣೆ ಮಾಡಲದೊಂದೇ ಜನರತಿ । ಭೂಷಣೆ ಮಾಡಲದೊಂದೆ ।
ಈಷಣತ್ರಯದ ದೋಷವಳಿದು ನಿ । ರ್ದೋಷಿಯಾದ ಪರದೇಶಿಗೆ ಜಗ
ದೊಳು ॥ಪಲ್ಲ॥ ಪ್ರೀತಿಲಿ ಕರೆದೊಯ್ದೀಶನೆ ಶಿವನೆಂ । ದೋತುವಂದಿಸಲ
ದೊಂದೆ ॥ ಜಾತಿಹೀನನೆಂದಾತುರದಿಂದಲಿ । ಮಾತುಗಳಾಡಲದೊಂದೇ ॥೧॥
ಹೋಳಿಗೆ ತುಪ್ಪೊಳ ಮನೆಯೊಳು ನೀಡುತ । ವೀಕ್ಷಿವ ನೀಯಲಿದೊಂದೆ ॥
ಸೂಳೆಮಗನೆ ಯೆಂದೊದರುತ ಹಳಸಿದ । ಕೂಳ ಹಾಕಲದೊಂದೆ ॥೨॥
ಅಯ್ಯಪ್ಪಾ ಯೆಂದೊಯ್ಯನೆ ಘನತರ । ಶಯ್ಯದೊಳಿರಿಸಲದೊಂದೆ ॥ ಕೈಯು
ವಿಡಿದು ಯೆಳೆದೆಳೆದು ನೂಕುತಲಿ । ಹೊಯ್ಯಲು ಬಯ್ಯಲದೊಂದೆ ॥೩॥
ಬಲ್ಲವರೆಂದುಲ್ಲಾಸಿಸಿ ಪಾಡುತ । ಪಲ್ಲಕ್ಕಿ ಮೆರೆಸಲದೊಂದೆ ॥ ಸಲ್ಲದಿವನು
ಬಲು ಕಳ್ಳನೆಂದು । ಪುರದಕ್ಷಿಂದ್ಹೊರಡಿಸಲೊಂದೆ ॥೪॥ ಜನುಕರಣಂ
ಗಳು ಖುಷಿಯೆಂದವರಿಗೆ । ವಿನಯಾವಿನಯಗಳೆಂದೇ ॥ ಘನಮಠೇಶನೊಳ
ಗನುದಿನ ಬೆರೆ । ದಿರುವನಿಗೆ ಶುಭಾಶುಭವೊಂದೇ ॥ ೫ ॥

೪೯

ಏನಾದಿ ಮನುಜಾ ಯೇನಾದಿ । ಶಿವಜ್ಞಾನವರಿಯದೆ ನೀನೆಲೆವಾದಿ ॥ಪಲ್ಲ॥ ಕಾಶಿ ಹಂಪೆ ಕೇದಾರ ಪರ್ವತ । ನಿವಾಸಿ ಎನಿಸಿ ನೀನೇನಾದಿ । ಆಶ ಪಾಶದೊಳು ಸಿಲ್ಕಿ ಹೊರಗೆ ಸನ್ಯಾಸಿಯಾಗಿ ನೀನೇನಾದಿ ॥೧॥ ವೇದ ವೇದಾಂತ ಶಾಸ್ತ್ರಾಗಮತರ್ಕವನೋದಿ ಬಳಲಿ ನೀನೇನಾದಿ ॥ ಮೇದಿನಿ ಯೊಳು ಬರೆಬೋಧೆವಡೆದುದಶ । ನಾದವಾಲಿಸಿ ನೀನೇನಾದಿ ॥೨॥ ಚಪಲ ತನದಿ ಬಹು ಜಪವನೆಣಿಸಿ ಘೋರ ತಪವ ಮಾಡಿ ನೀನೇನಾದಿ ॥ ಕಪಟ ಲಾಂಛನವನು ತಾಳುತೆ ಮರ್ತ್ಯದೊಳು ನಿಪುಣನೆನಿಸಿ ನೀನೇನಾದಿ ॥೩॥ ಸ್ನಾನ ಮೌನನೇಮ ಧ್ಯಾನಕ್ರಿಯಾ । ದ್ಯನುಷ್ಠಾನವ ಮಾಡಿ ನೀನೇನಾದಿ॥ ಪ್ರಾಣಾ ಪಾನಗಳನು ಮಾಣದೆ ಬಂಧಿಸಿ ಮೌನವಿರ್ದು ನೀನೇನಾದಿ ॥೪॥ ಸೃಷ್ಟಿಯೊಳಷ್ಟ ವಿಧಾರ್ಚನೆ ಕ್ರಿಯೆಗಳ । ಮುಟ್ಟಿ ಮಾಡಿ ನೀನೇನಾದಿ ॥ ಶ್ರೇಷ್ಠ ಶ್ರೀ ಘನಮಠವಾಸನನರಿಯದೆ । ಕಷ್ಟಬಟ್ಟು ನೀನೇನಾದಿ ॥೫॥

೫೦

ಶಿವ ಶಿವ ಶಿವ ಎನ್ನೆಲೆ ಮನುಜಾ । ಭವ । ಭವಬಂಧನವಳಿವುದು ಸಹಜ ॥ ಕುವಲಯದೊಳ್ಮೆರೆದಿರೊ' ನಿಜ । ನಿನ । ಗವನತನಾಗುವ ನಿನ ತನುಜ ॥ಪಲ್ಲ॥ ಆ ವಿಟಶ್ವೇತನು ಕಳತಂದಾ । ವೃದು । ಶಾವಂತಿಗಿಯ ಲರ್ಭುವಿಗೊಂದ ॥ ತೀವಿ ಭೀಳೆ ಶಿವನಿಗಿದೆಂದಾ । ಖಲರೆಕ್ಕೈವಲ್ಯಕೆ ಪೋದದ ರಿಂದ ॥೧॥ ಕಡುಪಾಪಿಷ್ಠ ವಿದಳನಾಗ । ಮುಡಿವೆಡೆಯೊಳು ಹರವೆನ ಲ್ಕಾಗ ॥ ಮೃಡನು ಮೆಚ್ಚಿ ತನ್ನ ಪುರಬೇಗ । ಭವತಡೆಯದಿತ್ತ ಕಾರಣ ದೀಗ ॥೨॥ ಅಜಭಾವದಿ ಗೋವತ್ಸವ ವಧಿ । ಸಿಜಗದೊಳರಿಯನ್ಯೆ ನಾನಿ ದನು ॥ ಮಜಶಿವ ಯನಲಾ ಸತಿಯಳನು । ಶಿವ ನಿಜಪುರಕೊಯಿದ ತಿಳಿದು ಇದನು ॥೩॥ ತವೆ ಬಿಲ್ಲೇಶ್ವರ ಬೊಮ್ಮನು ತಾ ರೌರವನರಕದಿ ತಾ ಬಿದ್ದಿರುತೆ ॥ ಸವಿನಯದಿಂದಲಿ ಶಿವದಿಡುತ । ಕಲುಷವ ನೀಗಿದ ತಿಳಿದಿ- ದತ್ವರಿತ ॥೪॥ ಜವನ ಭಟರು ಬಲುಕಿನಿಸಿಂದ ಕಾ । ಡುವ ವೇಳೆಯೊಳು ರಸನೆಯಿಂದ ॥ ಶಿವನ ನೆನವದಾಗದು ಮುಂದೆ । ಘನಮಠೇಶನ ದರುಶನ ದಯದಿಂದ ॥೫॥

೫೧

ಮಾಡೊ ಗುರುಭಜನೆ ನಿಜದೊಳು ಕೂಡುತಲಿ ನರನೆ ॥ ಮಾಡೊ ಗುರುಭಜನಾದಿ ಪಾಡುತೆ ಗಾಢ ಜಗದೊಳು ಪ್ರೌಢಿಯಿಂದಲಿ । ಮೂಢ ಮತಿಗಳ ಕೂಡಿಯಾಡದೆ । ನಾಡೆ ಭಕ್ತರ ನೋಡಿ ಮುದದೊಳು ॥ಪಲ್ಲ॥ ಕೋಪಗುಣ ಸಂತಾಪವೆಂಬತಿ । ಪಾಪಮತಿಗಳೆಪಾಪರಮ ಗುರು। ಶ್ರೀಪದಾಬ್ಜ ಪ್ರತಾಪವನು ನೆರೆ । ಸ್ಥಾಪಿಸುತೆ ಚಿದ್ರೂಪನಾಗಿ ॥೧॥ ತೋರಿಕೆಡುವತಿ ಘೋರತರ ಸಂ । ಸಾರ ಭೋಗಕೆ ಹಾರದೆ । ಸುವಿಚಾರದಿಂ ನಗುರೋ ರಧಿಕವೆಂ । ಬೀ ರಹಸ್ಯವ ಮೀರದನುದಿನ ॥೨॥ ಮೋಸ ಮಾಡುತಹಾಸೆ ಮೂರನು । ಹೇಸಿತನುಗುಣರಾಶಿಯೊಳುನೀ । ಗಾಸಿಯಾಗದ ಲಾಸ ಘನ ಮಠವಾಸಗನು ದಿನ ವಾಸನಾಗುತೆ ॥೩॥

೫೨

ನೋಡಲಾಗದೆ ದೇವ ನೋಡಲಾಗದೆ । ಕೂಡೆ ನಿನ್ನ ದಿಟ್ಟಿ ಮೂರು ನಾಡಲೇಸು ಮಾಡಲಿನ್ನ ॥ಪಲ್ಲ॥ ಮುಸುಕಲೀಯುದಿನ್ನ ಮೋಹ ನಿಸರವೆಂಬ ವನವನುರುಹಿ । ಭಸಿತವೆನಿಸಿ ರುದ್ರ ನಿನ್ನೊಸಲವಹ್ನಿ ನೇತ್ರದಿಂದ ॥೧॥ ಕಲುಷ ತಿಮಿರ ಮುಸುಕಿ ಮುಗಿದು ನಲಿಯದಿನ್ನ ಹೃದಯ ನಳಿನ । ವಲಕೆ ದಿವ್ಯ ರೂಪ ನಿನ್ನ ಬಲದ ಭಾನು ನಯನದಿಂದ ॥೨॥ ಕರುಣ ಕುಲಚಕೋರ ತಣಿಯೆ ಹರುಷ ಶರಧಿ ಮೀರಲಿನ್ನ । ವರದ ಶಂಭುಲಿಂಗಮಾಮ ದುರುಸುಧಾಕರಾಕ್ಷಿಯಿಂದ ॥೩॥

೫೩

ಮಾಡಲಿಲ್ಲವೇ ತಪವನು ಮಾಡಲಿಲ್ಲವೇ । ಕೂಡೆ ಸುಗುಣದೊಡನೆ ತಿಳಿದು ನೋಡಿ ತ್ರಿವಿಧ ಕರಣದಲ್ಲಿ ॥ಪಲ್ಲ॥ ಗುರುಭಜನೆ ಸುಕರ್ಮವೃತ್ತಿ ಹರನ ಪೂಜೆ ಶರಣ ಸೇವೆ । ಪರಮ ಸಾತ್ವಿಕಂಗಳುಂಟು ನೆರೆದು ನೆಲಸಿ ತನುವಿನಲ್ಲಿ ॥೧॥ ವಿನಯವನ್ನು ಹಿತವತರ್ಕ ವನಪಶಬ್ದವಚಲಿತಾರ್ಥವನ ಘನಮಂತ್ರವಾಗಮಂಗಳನಿತು ಹಿಡಿದು ವಚನದಲ್ಲಿ ॥೨॥ ಶಮೆ ವಿವೇಕ ವಾತ್ಮವಿದ್ಯೆದಮೆದಯಾ ವಿರಕ್ತಿ ಯೋಗ । ವಮಳ ರೂಪ ಶಂಭುಲಿಂಗ ವಮುದರ್ಗ ತೋರಿ ಸುಮನದಲ್ಲಿ ॥೩॥

೩೪

ಶರಣ ಜನರ ಸದುಹೃದಯ ನಳಿನದೊಳು ಪರಿಶೋಭಿಸುತ್ತಿಹುದು ನಿನ್ನ ಪಾದ । ಹರಿಯ ನಯನದ ಕುರುಹು ವಿಡಿದಿಹುದೀಗ ಗುರುಶಂಭು ಲಿಂಗ ನಿನ್ನ ದಿವ್ಯಪಾದ ॥ಪಲ್ಲ॥ ದಿಟ್ಟ ರಾವಣನು ರಜತಾಚಲವನೆತ್ತಲೊತ್ತಿ ಬಿಟ್ಟಿತು ರಸಾತಳಕೆ ನಿನ್ನ ಪಾದ । ನೆಟ್ಟನಂಧಕಾಸುರನೆದೆಯ ಮೇಲೆ ಭರ ತದ ಕಟ್ಟಳೆಗೆ ಕುಣಿದುದು ನಿನ್ನ ಪಾದ ॥ ಬೆಟ್ಟನೊಳು ಬರೆದ ಚಕ್ರವ ಜಲಂಧರನಿಗೆ ತೊಟ್ಟು ಸಿರವರಿದುದು ನಿನ್ನ ಪಾದ । ತಿಟ್ಟನೆ ತಿರುಗುವ ಮುಪ್ಪುರವ ನಿಟ್ಟಿಸಿ ಬೇಗ ಸುಟ್ಟು ಜಯಿಸಿತು ಶರ್ವ ನಿನ್ನ ಪಾದ ॥೧॥ ಮೃಗ ರೂಪದಳೆದಗಧರನರಸಲು ತನ್ನ ಬಗೆ ತೋರಿತಿಲ್ಲವಲ್ಲೋ ನಿನ್ನಪಾದ। ಬಗೆದು ಪಾತಾಳ ಮೇಳ ನುಳಿದಿಳಿದತ್ತಲತ್ತ ಮಿಗೆ ಮೀರಿ ಮೆರೆದುದು ನಿನ್ನ ಪಾದ ॥ ನಿಗಮ ನಿಕರ ಜಾಯಿಲಂಗಳನರಣ್ಯದೊಳು ಪುಗಲೊಡನೈದಿಸಿತ್ತು ನಿನ್ನಪಾದ । ನಗಜಾಧಿ ಪತಿ ನಿರುಪಮನಿತ್ಯನಿರವಧಿ ಜಗದಂತರ್ಯಾಮಿ ಶಿವ ನಿನ್ನ ಪಾದ ॥೨॥ ಚೆಂದನುಲಿಯುಂದವಾಗಿ ಮುಂದಿರೆ ಕಂದರ್ಪನನು ಬಂದು ತುಳಿದಾಡಿತಲ್ಲೋ ನಿನ್ನ ಪಾದ । ಕುಂದದಿಳೆ ಎಂಬ ರಥವಂದು ನಾಗ ಲೋಕದೊಡನೊಂದುವಂತೆ ಮೆಟ್ಟಿದುದು ನಿನ್ನಪಾದ ॥ ಚಂದಚಂದದಿಂದ ಕಾಳಿದಾಸ ಮೊದಲಾದ ಕವಿವೃಂದ ವೈದೆ ಬಣ್ಣಿಪುದು ನಿನ್ನ ಪಾದ । ಇಂದು ಕುಂದ ಹಿಮಹಾರ ಪುಂಡರೀಕ ಪಾಂಡುರಂಗ ಮಂದರ ಮಂದಿರವಾಸ ನಿನ್ನ ಪಾದ ॥೩॥ ಮನುಮುನಿನರನಾಗ ದನುಜದಿವಿಜರನು ದಿನದೊಳು ಭಜಿ ಪುದು ನಿನ್ನ ಪಾದ । ವಿನಮಿತ ಸುರವಿಸರದ ಮುಕುಟದ ಮಣಿ ಘನತೇಜ ದೊಡನಾಡಿ ನಿನ್ನಪಾದ ॥ ನೆನೆದವರಘರಿಪು ಗಹನದಹನನುತ ಜನವ ನರುಹರವಿನಿನ್ನ ಪಾದ । ಕನಕ ಸಿಖರ ನಿಜ ನಿಳಯುದನಜ ಸಖ ಜನನ ರಹಿತ ಭವ ನಿನ್ನ ಪಾದ ॥೪॥ ಪ್ರಣವದನೆಲೆಮಂತ್ರಗಣದ ಭವನ ಗುಣ ಮಣಿ ಕುಲಜಲ ನಿಧಿ ನಿನ್ನ ಪಾದ । ಅಣಿಮಾದಿಗಳ ಜನನದ ಭೂಮಿ ಸುಖದ ಸಂದಣಿ ಸತ್ಯ ಶುಭದಾಗು ನಿನ್ನ ಪಾದ।ಗಣತತಿಗಳ ಬೀಡು ತಣು ವಿನ ತಾಣ ತತ್ವ ದಣಿಮುಕುತಿಯ ಖಣಿ ನಿನ್ನ ಪಾದ । ಫಣಿಪ ಕಂಕಣ ಕರುಣಾರಸಭರಿತೇಕ್ಷಣ ಗುರುಶಂಭುಲಿಂಗ ನಿನ್ನ ಪಾದ ॥೫॥

ಸೋಲದಾತನೆ ವಿರತನು । ಮನದೊಳಗೆ ಬಾಲೆಯರ ಸಿಂಗರವನೆ ಕಂಡ. ॥ಪಲ್ಲ॥ ತಳಿರಡಿಯು ನುಣ್ದೊಡೆಗಳ ಚಲುವಿನೊಬ್ಬುಳಿಯುಹ ನಿತಂಬದ ನಡೆಗೆ । ಬಳಕುವತಿ ಬಡನಡುವಿನ ತೆಳುವ ಸುರನಳಿ ತೋಳ ನಲ್ಲಳನುವ ಕಂಡು ॥೧॥ ನಸುದೋರ್ಪ ಬಲ್ಮೊಲೆಗಳ ಲಾವಣ್ಯ ರಸವೊಸರ್ವ ಮುದ್ದು ಮೊಗದ ಕಾಂತಿ ॥ ಪಸರಿಸುವ ನಿಡುಗಂಗಳ ಜವ್ವನದ ಮಿಸುನಿವಣ್ಣದ ವೈಯ್ಯಳ ಕಂಡು ॥೨॥ ಜೊಲ್ಲೆಯುದ ಬಳಲು ಮುಡಿಯು ತೊಳಪಕೆಂಬಲ್ಲು ಕಂಬುಗ್ರೀವದ ಸೊಗಸನುಳ್ಳ ಚಂದುಟಿಯು ಪೊಗರನುಗುವತೆಳುಗಲ್ಲದ ಸಿಯುಳ ರೀತಿಯು ಕಂಡು ॥೩॥ ಮುರಿದು ನೋಡುವ ನೋಟದ ಮುಗುಳ್ನಗೆಯು ಸರಸದ ನಿಗಲೆಯು ನುಡಿಯು ಸನ್ನೆ । ಪೆರಸಿ ತೋರುವ ಭಾವದ ಮೋಹ ಮುಂಬರಿವ ಸೊಬಗಿನ ಸುವತಿಯು ಕಂಡು ॥ ೪ ॥ ಮನವನಳ್ಳಿರಿವುದೊಂದು ಭಯವಿಲ್ಲದನುಕೂಲ ನೀರೆ ತನ್ನನೆಳಸಿ । ವಿನಯುವಾಂತಿರಲಳುಪದೆ ನಿಜ ಧೈರ್ಯವನು ಶಂಭುಲಿಂಗದಿಂದ ಪಡೆದು ॥೫॥

೫೬

ಶ್ರೀಗುರು ವಚನದಿಂದಧಿಕ ಸುಧೆಯುಂಟೆ । ರಾಗದಿಂ ಜೇರಿನ್ನು ಭವ ಬೀಜವುಂಟೆ ॥ಪಲ್ಲ॥ ನರಜನ್ಮದಿಂದಿಹದೊಳು ಮಿಗಿಲುಂಟೆ । ಕರಣ ವಿಜಯದಿಂದೆ ಕಲಿತನವುಂಟೆ ॥ ಧರೆಗೆ ಯಾಚನೆಯಿಂದ ಲಘುತರವುಂಟೆ ಪರಬೊಮ್ಮದರುವಿನಿಂದುರೆ ಜಾಣ್ಮೆಯುಂಟೆ ॥ ೧ ॥ ಕಡು ಲೋಭದಿಂದೆ ದುರ್ಗುಣವನ್ಯವುಂಟೆ ಪಡೆದಪವಾದದಿಂ ಮರಣವಿನ್ನುಂಟೆ ॥ ಎಡವಿಡದಿಹ ಸತ್ಯದಿಂತಪವುಂಟೆ । ಕೆಡಿಸದಿಪ್ಪಭಿಮಾನದಿಂಧನವುಂಟೆ ॥ ೨ ॥ ತನುವಿದನುಳಿದಿಂದ್ರ ಜಾಲದಾಟಗಳುಂಟೆ । ನನೆಗೋಲಿಸಿಂದೆ ನೋಯಿಸುವಲುಗುಂಟೆ ॥ ವಿನಮಿತನಹುದರಿಂದುಪಚಾರವುಂಟೆ । ತನಗಿಂತ ಪ್ರಿಯುವಾದ ವಿಷಯುವೊಂದುಂಟೆ ॥೩॥ ಶಮೆಯಿಂದೆ ಮುಕುತಿಸಾಧನ ಪೆರತುಂಟೆ । ವಿಮಲ ಮಾನಸದಿಂದೆ ಶುಭತೀರ್ಥವುಂಟೆ ॥ ಕ್ರಮ ತಪ್ಪಿ ನಡೆವುದರಿಂ ಕಷ್ಟವಿನ್ನುಂಟೆ । ಮಮಕಾರದಿಂದ ಮಿಕ್ಕಿನ ಬಂಧವುಂಟೆ ॥೪॥ ಕರುಣದಿಂದತಿಶಯುವಹ ಧರ್ಮವುಂಟೆ । ವಿರತಿಯಿಂದಿತರ ಸಂಪದ ಸುಖವುಂಟೆ॥

ವರಭಕ್ತಿಯಿಂದೆ ಸಚ್ಚರಿತವೊಂದುಂಟೆ ಗುರುಶಂಭುಲಿಂಗದಿಂ ಪರದೈವ ಮುಂಟೆ ||೫||

ಬೇಡುವೆನಭವ ನಿಮ್ಮನು ಭವಭವದೊಳು | ಮಾಡೆನಗೊಲಿದು ಸುಗುಣ ಸಂತತಿಯನಿಂತು ||ಪಲ್ಲ|| ಎಡರಡಿಸಿದ ವೇಳೆಯೊಳು ಧೈರ್ಯ ವನುಸಿರಿ| ವಡೆದು ಜೀವಿಸುವೆಡೆಯೊಳು ವಿನಯವನು || ಕಡು ಜವ್ವನ ದೊಳು ವಿಕೃತಿ ದೋರದಿಹುದನು | ಪಿಡಿದ ನೇಮವನೆಡೆವಿಡದತಿ ಛಲ ವನು ||೧|| ಅಸುವಳಿಯಲು ದೇಹಿಯೆನಲೊಲ್ಲದಘಟನು | ಪುಸಿಯನೆಲ್ಲಿ ಯೂ ನುಡಿಯದ ಸತ್ಯವಿದನು || ಮಸಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ | ರೊಸೆದಹುದೆಂದು ಬಣ್ಣಿಸುವ ವರ್ತನವನು ||೨|| ವಿತರಣ ದೊಡನೆ ಭೋಗಿಸುವರ್ಥದೊದವನು | ಹಿತವಚನವೇ ತೊಡವೆನಿಪ ದಾನ ವನು || ಶೃತಿಬೋಧನೆಯೊಳುಪರತಿಯಿಲ್ಲದಿಹುದನು | ನುತಿವೆತ್ತ ಕೈಸಾ ರುತಿಹ ಮನೋರಥವನು ||೩|| ಕೋಪವಂಟದ ತಪವನು ಪರವಧುವಿನ | ರೂಪಗಂಡೆಳಸದ ಕರಣ ವಿಜಯವನು || ತಾಪವಡರಿ ಕೆಡಿಸದ ಸಾರ ಸುಖ ವನು | ಕಾಪಟ್ಯವಿಲ್ಲದಾಶ್ರಮ ಧರ್ಮರತಿಯನು || ೪ || ಧರೆಯೊಳತ್ಯಧಿಕ ವೆನಿಪ ಶಾಂತಿ ಮತವನು | ಕರುಣವಿದ್ಯೆಗಳುಳ್ಳ ಗುರುಭಜನೆಯನು || ಪರ ತರ ಮುಕುತಿದೋರುವ ಶಾಸ್ತ್ರವನು ಕಂಡು | ಹರ ಶಂಭುಲಿಂಗ ನಿಮ್ಮ ಡಿಯ ಭಕ್ತಿಯನು || ೫ ||

೫೮

ಪಾಲಿಸೆನ್ನನು ಪದುಳವೆರಸಿ ಪರಶಿವನಿಗತಿ | ಮೇಲೆನಿಪ ಸುಗುಣ ಸಂಪನ್ನೆ ಶರ್ವಾಣಿ ||ಪಲ್ಲ|| ಜರೆ ಮರಣವನು ಜಯಸಿದಮೃತಸೇವನೆ ಯುಳ್ಳ | ಹರಿಯಜಾದಿಗಳ ಬಲುಹನಪಹರಿಸಿದಾ || ಗರಳವನು ನಲಿ ದುಂಡು ಹರನಳುಕದುಳಿದಭಾ | ಸುರತೆ ನಿನ್ನೈರದಾಳಿಯ ಮಹಿಮೆ ಗಿರಿಜೆ ||೧|| ಹೇಳ ಹೆಸರಿಲ್ಲದಭವನು ನಿನ್ನ ದೆಸೆಯಿಂದ | ಭಾಳಲೋಚನ ನೆನಿಸಿ ನಿಖಿಳ ನಿರ್ಜರರ || ಮೇಳಕಧಿಪತಿಯಾದ ನೆಂದೊಡಾಗಮ ನಿಗಮ | ಜಾಲವೈದುವವೆ ನಿಜನುತಿಗೆ ನಗಜಾತೆ ||೨|| ನಿನಗೆ ತನ್ನರೆಯೊ ಡಲನೊಲಿದಿತ್ತನೀಶನೆಂ | ದೆನುತಿಹರು ತಿಳಿದು ನೋಡದೆ ಕವೀಶ್ವರರು ||

ಮನಸಿಜಾರಿಗೆ ಮಂತ್ರಮಯ ಮೂರ್ತಿಗಳನು ನೀ । ನನುಗೊಳಿಸಿ ಪೂಜ್ಯ ನೆನಿಸಿದೆ ಲೋಕಜನನಿ ॥೩॥ ಜಡೆಗಟ್ಟಿ ತಿರಿದುಂಡು ಮರುಳಗಳ ಕೂಡಿ ವೈ ದೊಡೆದು ಬೂದಿಯನು ಸುಡುಗಾಡೊಳಾಡಿ ॥ ಜಡರೀತಿವಡೆದ ರುದ್ರನಿಗೆ ನೀನೊಲಿದು ಕೈವಿಡಿದು ಪಾವನ ಚರಿತನೆನಿಸಿದ ಭವಾನೀ ॥೪॥ ಸಿರಿಸಕಲ ಸಿದ್ಧಿ ಸಂಪದ ವಿದ್ಯೆವಿಭವಾದಿ । ಪರಿಕರದೊಳೊಂದಿ ನೀನುಪಕರಿಸದಿರಲು ॥ ಗುರುಶಂಭುಲಿಂಗದೊಳಗಾವಲೇಸಿಹುದಿಳೆಯು । ಸರನ ಮನದೊಲವೀಯ ಲೆಳಸಿದೊಡೆ ಗೌರಿ ॥೫॥

೫೯

ಸಕಳಕೆಲ್ಲಕೆ ನೀನೆ । ಅಕಳಂಕ ಗುರುವೆಂದು । ನಿಖಿಳ ಶಾಸ್ತ್ರವು ಪೇಳು ತಿರಲರಿದೆನು ॥ಪಲ್ಲ॥ ಎರಗಂಬಳಿಯ ಸಿದ್ಧ । ವರಲಿಂಗಸಾಮದಿಂ । ಹರನೆ ನೀನೆನಗೆ ದೀಕ್ಷೆಯ ಮಾಡಿದೆ ॥ ವರಷಡಕ್ಷರಿಯ । ವರನಾಮದಿಂದೆನಗೆ । ಅರುಹಿದಿರಿ ಶಿವಶಾಸ್ತ್ರದನುಭವವನು ॥೧॥ ಅವರವರ ದರುಶನಕೆ । ಅವರ ವರ ವೇಷದಲಿ । ಅವರವರಿಗೆಲ್ಲ ಗುರು ನೀನೊಬ್ಬನೆ ॥ ಅವರವರ ಭಾವಕ್ಕೆ ಅವರವರ ಪೂಜೆಗಂ ಅವರವರಿಗೆಲ್ಲ ದೇವ ನೀನೊಬ್ಬನೆ ॥೨॥ ಹೋರಾಟ ವಿಕ್ಕಿಸಲು ಬೇರಾದೆಯಲ್ಲದೆ । ಬೇರುಂಟೆ ಜಗದೊಳಗೆ ಎಲೆ ದೇವನೇ ॥ ಆರು ಆರಿಯರು ನೀನು । ಬೇರಾದ ಪರಿಗಳನು । ಮಾರಾರಿ ಶಿವಷಡಕ್ಷರಿ ಲಿಂಗವೇ ॥೩॥

೬೦

ಎನ್ನ ಕಾಯವು ನಿನಗೆ । ಉನ್ನತಾಲಯವಾಯಿ । ತಿನ್ನೆನಗೆ ಭವ ವುಂಟೇ ಎಲೆ ಲಿಂಗವೇ ॥ಪಲ್ಲ॥ ಎನ್ನ ಕಾಲುಗಳೆರಡು ಉನ್ನತದ ಕಂಭವೈ । ಎನ್ನ ಒಡಲೇ ನಿಮಗೆ ದೇವಾಲಯ ॥ ಎನ್ನ ತೋಳುಗಳೆರಡು । ಉನ್ನತದ ಮದನಕೈ । ಎನ್ನ ಶಿರ ಸೌವರ್ಣ ಕಲಶವಯ್ಯ ॥೧॥ ಎನ್ನ ಕಿವಿ ಕೀರ್ತಿ ಮುಖ । ಎನ್ನ ನಾಲಿಗೆ ಘಂಟೆ । ಎನ್ನ ನಯನಗಳೆರಡು ಜ್ಯೋತಿ ನಿಮಗೆ ॥ ಎನ್ನ ಮುಖವೇ ದ್ವಾರ । ವೆನ್ನ ದಂತವೆ ಅದಕೆ । ಮಿನ್ನುತಿಹ ಮೌಕ್ತಿಕದ ಸೂಸಕಗಳು ॥೨॥ ಎನ್ನಧರಜವಳಿಗದ । ಎನ್ನ ನಾಸಾಪುಟವು । ನನ್ನಿಯಿಂ ಸೌರಭ್ಯ ರಸಘಟಿತವು ॥ ಚನ್ನಾಗಿ ಬೀಸುವ ಹೊನ್ನ ಚಾಳೀಂದ್ರವೈ ಇನ್ನುಳಿ ಉಪಕರಣವೆಂತೆಂದೆನೆ ॥೩॥ ಎನ್ನ ಸಮತೆಯೆ ಜಲವು । ಎನ್ನ ಸದ್ಗುಣ

ಗಂಧ । ಎನ್ನ ನಿತ್ಯತ್ವವೇ ಅಕ್ಷತೆಗಳು ॥ ಎನ್ನ ಜ್ಞಾನವೇ ಪುಷ್ಪ । ಎನ್ನ ಭಕ್ತಿಯೇ ಬೋನ । ಎನ್ನ ಮನವೇ ನಿಮಗೆ ಪೂಜಾರಿಯು ॥೪॥ ಇಂತಪ್ಪ ಪೂಜೆಯನು ಸಂತಸದಿ ಕೈಕೊಳುತ । ಕಂತುಹರ ಶಿವಷಡಕ್ಷರಿ ಲಿಂಗವು ॥ ಮುಂತೆ ಎನ್ನೊಳಗೆ । ನಿಶ್ಚಿಂತನಾಗಿರುತಿರಲು । ಚಿಂತೆಯುಂಟೇ ಹಲವು ಭವಭೀತಿಯ ॥೫॥

೬೧

ಎನಿಸನೋದಿ ಫಲವದೇನು । ಎನಿಸ ಕೇಳಿ ಫಲವದೇನು । ಮನಸು ತನ್ನ ದುರ್ಗುಣಗಳ ಬಿಡದು ಶಿವಶಿವ ॥ಪಲ್ಲ॥ ಇಂದುಧರನ ಚರಣದಲ್ಲಿ ಹೊಂದಿ ಸುಖದೊಳಿರದು ಮನವು । ಕುಂದದನ್ಯ ವಿಷಯದತ್ತ ಹರಿವುದೆಂತೆನೆ ॥ ಒಂದು ಶುನಿಯ ಹಿಡಿದು ತಂದು ಅಂದಣವನು ಏರಿಸಿರಲು । ಮುಂದೆ ಅಡಗ ಕಂಡು ನೆಗೆದ ಮಾಳ್ಕೆಯಾಯಿತು. ॥೧॥ ಸೊಗಸು ಶಿವನ ಮಂತ್ರವನ್ನು ನೆಗಳುವುದಕೆ ಎನ್ನ ಜಿಹ್ವೆ । ಸೊಗಡಿಸುವದು ಕೀಳು ನುಡಿಯ ಒಲಿವುದೆಂತೆನೆ ॥ ಹಗಲು ಇರುಳು ತನ್ನ ಬಾಯಿ । ಸಿಗುವುದರಿಯದಂತೆ ನಾಯಿ । ಜಗುಳುವುದಕೆಯಲಸದಂತೆ ಚಿಪ್ಪೆಯಲಸದು ॥೨॥ ಮಂಗಳಾತ್ಮ ಷಡಕ್ಷರಿಯ ಲಿಂಗದಡಿಯ ಪೂಜಿಸುವಡೆ ಕೊಂಗಿ ಮನವು ಸ್ವಸ್ಥಿರವನು ಐದದೆಂತೆನೆ ಹಿಂಗದೊಲಿದುಘನಸುಗಂಧ । ಸಂಗಡಿಸುತ । ತೊಡೆಯಹಂದಿ । ಹಾಂಗೆ ಇರಬೆ ಗಂಜಳಕ್ಕೆ ಓಡುವಂದದಿ ॥೩॥

೬೨

ಎನಗೆ ಭೋಗ ಭಾಗ್ಯ ಬೇಡ । ಎನಗೆ ಜಪವು ತಪವು ಬೇಡ । ಎನಗೆ ನಿಮ್ಮ ತೊತ್ತು ಸೇವೆ ನಿತ್ಯವಾಗಲೈ ॥ಪಲ್ಲ॥ ಎನ್ನ ಕಂದಿಸುತ್ತ ಬಹಳ ಎನ್ನ ಬಾಧಿಸುತ್ತ ಬಿಡದೆ । ಎನ್ನದೊಂದು ನೆವಗಳಿಂದ ಕಾಡಿದವರಿಗೆ ॥ ಎನ್ನ ಕೊಂದಡವರಿಗೆಲ್ಲ । ಎನ್ನ ಪೂಜೆ ಫಲಗಳೆಲ್ಲ ಉನ್ನತದೊಳಗವರಿಗಾಗಿ ಸುಖದಿ ಬಾಳಲಿ ॥೧॥ ಹಿಂದೆ ಎನ್ನ ಬೈದವರಿಗೆ । ಮುಂದೆ ಎನ್ನ ಬೈದವರಿಗೆ। ಕುಂದದೆಲ್ಲ ಜನರ ನಡುವೆ ಬೈದಡವರಿಗೆ ॥ ಇಂದುಧರನ ಕರುಣದಿಂದೆ । ಅಂದಣವನು ಏರುವಂತೆ । ಕುಂದದೊಲಿದು ಅವರಿಗೆಲ್ಲ ಭೋಗವಾಗಲಿ ॥೩॥ ಹಿಂಗದೆನ್ನ ನಿಂದಿಸಿದ ಜ । ನಂಗಳೆಲ್ಲ ಸುಖದೊಳಿರುವ । ಹಾಂಗೆ ಶಿವನು

ಅವರಿಗೆಲ್ಲ ಭಾಗ್ಯವೀಯಲಿ ॥ ಮಂಗಳಾತ್ಮ ಷಡಕ್ಷರಿಯ ಲಿಂಗ ನಿನ್ನತೊತ್ತು ಸೇವೆ ಸಾಂಗವಾಗಿ ಬಿಡದೆ ಎನಗೆ ನಿತ್ಯವಾಗಲ್ಕೆ ॥೩॥

೬೩

ತನುವಿಡಿದ ದುಷ್ಕೃತವ । ನೆನೆನೆನಲು ಪೇಳುವೆನು । ಮನವೊಲಿದು ಕೇಳು ನೀನೆಲೆಯಾತ್ಮನೆ ॥ಪಲ್ಲ॥ ಅನ್ನ ಉದಕದ ಚಿಂತೆ । ಎಣ್ಣೆ ನೀರಿನ ಚಿಂತೆ ಬಣ್ಣ ಬಳಿದಾಭರಣ ತೊಡುವ ಚಿಂತೆ ॥ ಮಣ್ಣು ಮನೆಗಳ ಚಿಂತೆ । ಹೊನ್ನು ಹೆಣ್ಣಿನ ಚಿಂತೆ ಇನ್ನು ಪುತ್ರರ ಜೇಡಿ ಬಳಲ್ಕೆ ಚಿಂತೆ ॥೧॥ ಅರಸುಗಳ ಭಯವಿದಕೆ । ಚಪಲ ಚೋರರ ಭಯವು । ಮರಳಿ ಅಗ್ನಿಯ ಭಯವು ನೀರ ಭಯವು ॥ ಉರಗ ವ್ಯಾಘ್ರನ ಭಯವು । ಅರಿರೋಗಗಳ ಭಯವು । ಕರ ಕಷ್ಟ ತನುವಿದಕೆ ಭಯವು ನೋಡಾ ॥೨॥ ಶೀತೋಷ್ಣಗಳ ಭೀತಿ ಭೂತ ಪ್ರೇತದ ಭೀತಿ ಓಡು ನಡೆಸಲು ಮುಳ್ಳು ನಡುವ ಭೀತಿ॥ ಮಾತು ಮಾರನ ಭೀತಿ। ರಾತ್ರಿ ಹಗಲಿನ ಭೀತಿ। ಈ ತನುವ ಒಡಿದಿನಿತು ಭೀತಿ ನೋಡಾ॥೩॥ ಆಗಲದಕೇನೆನಲು। ಸಾಗಿಸಲು ನಿನಗಿವನು । ಆಗಬಹುದೆ ಧರೆಗಗನವುಳ್ಳತನಕ ॥ ಆಗ ಹುಟ್ಟಿದ ಬಳಿಕ । ಬೇಗ ಸಾವೀತನುವ ಹಾಗೆ ಮನವೇ ನೀನು ನಂಬಬಹುದೇ ॥೪॥ ಇಂತಪ್ಪ ತನುವಿನ ಚಿಂತೆಯುಳಿದಾಲಿಂಗ । ಭ್ರಾಂತಿಯೊಳಗಿರು ನಿನಗೆ ಸುಖ ತಪ್ಪದು॥ ಮುಂತೆ ನಿನ್ನುವನು ತನ್ನಂತೆ ಮಾಡುವ ನೊಲಿದು । ಕಂತು ಹರನ ಷಡಕ್ಷರಿಲಿಂಗವು ॥೫॥

೬೪

ಧರೆಯುತ್ತಲೆನ್ನನು ಬರಿಸದಿರು ಸದ್ಗುರುವೆ । ಧರೆಯ ಪಾಪದೊಳು ನಾ ಜನಿಸಲಾರೆ ॥ಪಲ್ಲ॥ ಹುಸಿ ಕಳವು ಡಂಭಕವು । ನುಸುಳು ಆರಡಿತಳ್ಳಿ । ಹಿಸುಣ ಹೀನದಯಾದ ಪಬ್ಬಗಾರ ॥ ಕಿಸುಕುಳವು ಕೊರಚಾಟ । ವಿಷಮ ವಿಗಡವು ಕರುಬು । ಹೊಸ ಹುರುಡು ಜಾರದಾ ಜನ್ಮಾಲಯ ॥೧॥ ನಿರುದಯವು ನಿಷ್ಠುರವು । ದುರುಳತ್ವಘಾಳಕವು । ಪರಬಂಧಕವು ಡಂಭವಪವಾದವು ॥ ನೆರೆ ಚಂಡಿತನ ಪೊಲಬು । ಪರಧನದ ವಂಚನೆಯು । ಪರರ ಕೆಡಿಸುವ ಸಿದ್ಧಿಗಳು ಮಂತ್ರದ ॥೨॥ ಹರನರ್ಚಕರು ಅಲ್ಪ ಹರನಿಂದಕರು ಬಹಳ । ಗುರುಭಕ್ತರಲ್ಪ ಗಡುವಿಗಳು ಬಹಳ ॥ ಹರಶೃತಿಯ ಬಿಟ್ಟು ತಾ । ನರಸ್ಮೃತಿಯ ಲಾಲಿಸದು । ನಿರಯದಾಲಯವಾಗಿ ತೋರುತಿಹದು ॥೩॥

ಪತಿವ್ರತೆಯರಿಲ್ಲ ಪರ । ಸತಿ ಮುಖಿಯರಿರುತಿಹರು । ಜಿತಕಾಮರಿಲ್ಲ ಅತಿ ಕಾಮರಿಹರು ॥ ವ್ರತ ನೇಮಗಳಿಲ್ಲ ಕೃತಕಿಗಳು ಘನವಯ್ಯ । ಕ್ಷಿತಿಯು ಅವಗುಣಿಗಳಿಗೆ ತವರುಮನೆಯು ॥೪॥ ಇಲ್ಲವೆನಬಾರದಲೆ । ಇಲ್ಲುಂಟು ಧರ್ಮಿಗಳು । ಕಲ್ಲೊಳಗೆ ಅಡಗಿರ್ಪ ಪರುಷದಂತೆ॥ ಖುಲ್ಲ ಮಾನವ ನಿನಗೆ। ಒಳ್ಳಿದರು ಕಾಣಿಸರು । ಒಲ್ಲೆ ಮರ್ತ್ಯರ ಷಡಕ್ಷರಿಲಿಂಗವೇ

—

ಘನಮಹಿಮಲಿಂಗವೇ । ಅನುಪ್ರಾಣಿ ಎನ್ನ ಕರ । ವನಜಕ್ಕೆ ಬಂದು ಚುಳುಕಾದಿರಲ್ಲ ॥ಪಲ್ಲ॥ ತರಣಿ ಕೋಟಿಯ । ಪ್ರಭೆಯು । ಕಿರಿದೆನಿಪ ಬೆಳಗಿನಾ । ವರಹೇಮ ಶೈಲಾಗ್ರದೊಳಗೊಪ್ಪುವ ॥ ಹರಗಣಂಗಳ ಸುಖವ । ನೆರೆಯುಳಿದು ಎನ್ನ ಕರ । ಸರಸಿಜಕೆ ಬಂದು ಚುಳುಕಾದಿರಲ್ಲ ॥೧॥ ಹರಿಯಜರ ತಿಂಥಿಣಿಯು । ಸುರರುಗಳ ವೊತ್ತವಾ । ವರ ಮುನೀಶ್ವರರುಗಳ ಸಂತಾನದಾ ॥ ಹರುಷದಾನಂದದೊಳು । ನೆರೆಯುಳಿದು ಎನ್ನ ಕರ । ಸರಸಿಜಕೆ ಬಂದು ಚುಳುಕಾದಿರಲ್ಲ ॥೨॥ ಹರಿಗೆ ನಿಲುಕದ ಚರಣ। ಸರಸಿಜಭವನೊವ್ಮೆ । ಅರಸಿ ಕಾಣದ ನಿಮ್ಮ ಶ್ರೀ ಮುಕುಟವು॥ ಪರಮ ವಾಚಾತೀತ। ಕಿರಿದಾಗಿ ಎನ್ನ ಕರ । ಸರಸಿಜಕೆ ಬಂದು ಚುಳುಕಾದಿರಲ್ಲ ॥೩॥ ಮಡದಿ ಗಿರಿಜಾತೆಯನು । ತೊಡೆಯಮೇಲಿಂದಿಳುಹಿ । ಒಡನೆ ಗುಹಗಣರಾಯ ವೀರೇಶರೆನಿಪ ॥ ಕಡು ಮೋಹದತಿಸುತರ । ಬಿಡುತೆನ್ನ ಕರದೊಳಗೆ । ಒಡೆಯರೊಡೆಯನೆ ಬಂದು ಚುಳುಕಾದಿರಲ್ಲ ॥೪॥ ಎನ್ನಲ್ಲಿಯುಪಚಾರ । ಇನ್ನೇನು ನಿಮಗುಂಟು । ಸನ್ನುತದ ಶಿವಷಡಕ್ಷರಿಲಿಂಗವೇ ॥ ಎನ್ನ ಮನ ಪ್ರಾಣಗಳು । ಹೊನ್ನ ಹಾವಿಗೆಯಾಗಿ । ನಿನ್ನ ಚರಣಕ್ಕೆ ಯೋಗ್ಯ ಮೆಟ್ಟಾಗಲಿ ॥೫॥

೬೬

ಶಿವನೊಳಗೆ ವಿಶ್ವಾಸ । ಶಿವನೊಳಗೆ ನಂಬಿಗೆಯು । ಶಿವನೊಳಗೆ ಮೋಹವಿರೆ ತಾನೆ ಶಿವನು ॥ಪಲ್ಲ॥ ಕುರಿಯ ಹಿಕ್ಕೆಯ ತಂದು । ಹರನೆಂದು ಭಾವಿಸುತೆ । ಕುರಿಯ ಹಾಲನು ಕರೆದು ತಂದೆರೆಯುತ ॥ ಇರುತಿರಲು ತಂದೆ ತಾ । ಪರಿತಂದು ಕೆಡಿಸಲು । ಶಿವವರಿವ ವಿಶ್ವಾಸವನು ನೋಡಿರೆ ।೧। ಭೂಮಿಯೊಳಗಭಿಮಾನ । ಕಾಮಿನಿಯರಿಂದೆಂದು । ಸೋಮಧರ ಚರ

ರೂಪಿನಿಂದ ಬಂದು ಕಾಮಿನಿಯ ಬೇಡಿತ್ತ । ಭೂಮೀಶ ಉಲ್ಲಾ ಮಹಾ ವಿಶ್ವಾಸವನು ನೋಡಿರೇ ॥೨॥ ಏಣಾಂಕಧರಸಿರವು । ಊನವಾಗಲು ಕಂಡು । ಕ್ಷೋಣೀಶ ತನ್ನ ಕರ ಯುಗವ ಕಡಿದು ॥ ಕ್ಷೋಣಿಯೊಳು ನುತಿವೆತ್ತು ಜಾಣ ಕರಗಳ ಪಡೆದು । ಬಾಣನೆಂಬನ ನಂಬುಗೆಯ ನೋಡಿರೆ ॥೩॥ ಹಾಲು ಪಾಯಸ ತನ್ನ । ನಾಲಿಗಿಗೆ ಸವಿಸವಿದು । ಬಾಲೆ ತಾನುಂಬುವದನುಳಿದು ಬಳಿಕ ॥ ಲೀಲೆಯಿಂದಲಿ ತಾನು । ಶಿವಗುಣಿಸಿದ ಳೊಮ್ಮೆ ಚೋಳಿಯಕ್ಕನ ಮೋಹವನು ನೋಡಿರೇ ॥೪॥ ಇಂತಪ್ಪ ವಿಶ್ವಾಸ ಇಂತಪ್ಪ ನಂಬುಗೆಯು । ಇಂತಪ್ಪ ಮೋಹ ತನಗಿಲ್ಲದನಕ ॥ ಸಂತತದಿ ಲಿಂಗವನು । ಮುಂತೆ ಪೂಜಿಸುತಿರಲು । ಎಂತೊಲಿವನಯ್ಯ ಷಡಕ್ಷರಿ ಲಿಂಗವು ॥ ೫ ॥

೬೭

ಎಲ್ಲ ಶರಣರ ನೆನೆದು । ಇಲ್ಲಿ ನಾನತನಾಗಿ । ಎಲ್ಲರನು ಒಂದೊಂದು ಬೇಡಿಕೊಂಬೆ ॥ ಪಲ್ಲ ॥ ಭಕ್ತಿಯಿಲ್ಲದ ಧರ್ಮ । ವ್ಯರ್ಥವಾಗುವದೆಂದು । ಭಕ್ತಿತ್ರಯವ ಕಲಿಸಿ ಮುಕ್ತನೆನಿಸಿ ॥ ಮುಕ್ತಿ ಪದವಿಗೆ ಸಂದ । ಕರ್ತೃಬಸವೇಶನತಿ । ಭಕ್ತಿ ಭಿಕ್ಷೆಯ ನೀಡಿ ಸಲಹೆನ್ನನು ॥೧॥ ಶಿವನೊಳಗೆ ಪ್ರಾಣವನು। ತವೆಬೆರೆಸಿ ಹೊರಗಳಿದು । ಶಿವ ಬೆಳಗಿನೊಳು ಪರಮ ತಪವನೈದಿ ॥ ಶಿವನು ತಾನಾಗಿರ್ದ ಶಿವಸಿದ್ಧ ರಾಮಯ್ಯ । ಶಿವಯೋಗ ಭಿಕ್ಷವನು ನೀಡು ಎನಗೆ ॥ ೨ ॥ ಉರ್ವಿಪತಿಯಂ ಬಿಟ್ಟು । ನಿರ್ವಾಣಯುತೆಯಾಗಿ ಸರ್ವ ಕರ್ಣೇಂದ್ರಿಯ ಗುಣಗಳಳಿದು ॥ ಪರ್ವತೇಶನ ಬೆರೆದ ಸರ್ವಸುಖಿ ಮಹಾದೇವಿ । ನಿರ್ವಾಣ ಭಿಕ್ಷೆಯನು ನೀಡು ಎನಗೆ ॥೩॥ ಇಂಬರಿದು ಶಿವನೊಳಗೆ ಸಂಭ್ರಮದ ನುಡಿಗಲಿತು । ಕುಂಭಿನಿಯ ಜನರೊಳಗೆ ನುಡಿಗಳರಿತು ॥ ಗಂಭೀರವಾಗಿ । ಸ್ವಯಂಭುವಹ ಅಜಗಣ್ಣ ಗಂಭೀರ ಭಿಕ್ಷವನು ನೀಡು ಎನಗೆ ॥೪॥ ನಮ್ಮ ಶರಣರು ಬಹಳ ಧರ್ಮಿಗಳು ನಿರ್ಮಳರು । ಒಮ್ಮೆಯುಂ ಭಿಕ್ಷವನು ಇಲ್ಲೆನ್ನರು ॥ ನಮ್ಮ ಸಂರಕ್ಷಿಸುವ । ಧರ್ಮಭಿಕ್ಷವನುಂಡು ನೆಮ್ಮುವೆನು ಶಿವಷಡಕ್ಷರಿ ಲಿಂಗವ ॥೫॥

೬೮

ಶಿವಶರಣರಾಮನೆಯ ತವೆ ಸೇವೆಯನು ಮಾಡಿ । ಭವವ ಗೆದ್ದೆನು ಎನಗೆ ಸರಿಯದಾರು ॥ಪಲ್ಲ॥ ಬಸವೇಶ್ವರನು ಚನ್ನ ಬಸವೇಶ್ವರನು ಕರಣಿ ।

ದಸರಯ್ಯ ಮೋಳಿಗೆಯ ಮಾರಯ್ಯನ ॥ ಮುಸಣಯ್ಯಗಳ ಮನೆಯ ಕಸವ ಗುಡಿಸುವ ಮಹಾ । ಹೊಸ ಸೇವಕರು ನಮಗೆ ಸರಿಯದಾರು॥೧॥ ಚನ್ನಯ್ಯ ನಗ್ಗಣಿಯ ಹೊನ್ನಯ್ಯ ಗಾಣದಾ। ಕನ್ನಯ್ಯ ಧೂಳಿದೇವರು ಬೇಡರಾ॥ ಕಣ್ಣಯ್ಯಗಳ ಮನೆಯ ಉನ್ನತದ ಸೇವಕರು। ಇನ್ನು ಧರೆಯೊಳು ನಮಗೆ ಸರಿಯದಾರು ॥೨॥ ಹರಳಯ್ಯ ಮಧುವಯ್ಯ ಬಳ್ಳೇಶ ಮಲ್ಲಯ್ಯ । ಗೊಲ್ಲಾಳದೇವ ಹಾವಿನ ಹಾಳಿನಾ ॥ ಕಲ್ಲಯ್ಯಗಳ ಮನೆಯ ಹುಲ್ಲು ಸೊಪ್ಪನೆ ತರುವ । ಬಲ್ಲಿದರು ನಮಗಿನ್ನು ಸರಿಯದಾರು ॥೩॥ ಬಾಪೂರು ಬೊಮ್ಮಯ್ಯ ದೇವರ ದಾಸಯ್ಯ । ಜಗದೇವ ಮಲ್ಲಯ್ಯ ಬೊಮ್ಮಣ್ಣನ ॥ ಆವಾವ ಜಗದೊಳಗೆ ಆವಂದ್ಯರಾಮನೆಯ । ಸೇವಕರು ನಮಗಿಂದು ಸರಿಯದಾರು ॥೪॥ ಚಿಕ್ಕಯ್ಯ ಡೋಹರ ಕಕ್ಕಯ್ಯ ಸೊಡ್ಡಳಾ । ಆಯ್ದಕ್ಕಿ ಮಾರಯ್ಯ ರಾಮಯ್ಯನು ॥ ಚಕ್ಕಲಿಗೆ ನಾಗಯ್ಯ ಅಕ್ಕರಿನ ತೊತ್ತಿನಾ । ಮಕ್ಕಳಪ್ಪವು ನಮಗೆ ಸರಿಯದಾರು ॥೫॥ ಹಾದರದ ಬೊಮ್ಮಯ್ಯ ಮಾದರ ಧೂಳಯ್ಯ । ಮೇದಾರ ಕೇತಯ್ಯ ವಹಿಲಯ್ಯನ ॥ ಆದಯ್ಯಗಳ ಮನೆಯ ಕಾದುಕೊಂಡಿರುವಂಥ । ಆದಿಕರು ನಮಗಿನ್ನು ಸರಿಯದಾರು ॥೬॥ ಸಾಮವೇದಿಯು ಸಿದ್ಧರಾಮಯ್ಯ ಮಯದುನ । ರಾಮಯ್ಯ ಏಕಾಂತ ರಾಮಯ್ಯನ॥ ಭೀಮಯ್ಯಗಳ ಮನೆಯ ಆ ಮಹಾ ಸೇವಕರು । ಈ ಮಹಿಯೊಳಿಗಿನ್ನು ಸರಿಯದಾರು ॥೭॥ ಮೊರನದ ಮೆಮ್ಮಯ್ಯ ಮೊರಟದಾ ಬಂಕಯ್ಯ । ತಿರುನೀಲಕಂಠಯ್ಯನಣು ಮೂರ್ತಿಯು ॥ ಗುರು ಮಲ್ಲಿಕಾರ್ಜುನಯ್ಯ ವರ ಪಂಡಿತರ ಮನೆಯ । ತುರುಗಾಹಿಗರು ನಮಗೆ ಸರಿಯದಾರ ॥೮॥ ಬಂಕಯ್ಯ ಶಿವರಾತ್ರಿ ಸಂಕಯ್ಯ ಹೆಡೆಹಲ್ಲ । ಬಂಕಯ್ಯ ಮರುಳು ವೇಷದೊಳೊಪ್ಪುವ ॥ ಶಂಕರೇಶ್ವರನವರ ಕಿಂಕರರ ಕಿಂಕರರ । ಲೆಂಕರಪ್ಪವು ನಮಗೆ ಸರಿಯದಾರು ॥೯॥ ಕುಂಬಾರ ಗುಂಡಯ್ಯ ಅಂಬಿಗರ ಚೌಡಯ್ಯ । ಕೆಂಭಾವಿ ಭೋಗಯ್ಯ ಶ್ವಪಚಯ್ಯನ ॥ ಮುಂಬಾಗಿಲನು ಕಾಯ್ವ ನಂಬಿಗೆಯ ಸೇವಕರು । ಕುಂಬಿನಿಯೊಳೆಮಗಿನ್ನು ಸರಿಯದಾರು ॥೧೦॥ ಮಳೆಯರಾಜನು ಚೋಳ ವಲಘಂಡಸೈನಾರು । ಕಲಿನಾಥನಾ ಚಾರಮನಂಬಿಯ ॥ ಕಳವೆತ್ತ ಚಂಗಳೆಯ ಒಳ ಬಾಗಿಲನು ಕಾಯ್ವ । ಸಲುಗೆವಾಳರು ನಮಗೆ ಸರಿಯದಾರು ॥೧೧॥ ಸಿರಿಯಾಳ ಕಲಿಯರು ಗುರುಭಕ್ತನವನಂದಿ । ಅರಿಯಮನುವಾಳು ನಮಿತಾಂಡಾರ್ಯರ ॥

ಮೆರೆವಿಂಡದೇವರ ಚರಣ ರಕ್ಷೆಯ ಪಿಡಿದು । ವರವ ಪಡೆವರು ನಮಗೆ ಸರಿಯದಾರು ||೧೨|| ಚೋಳಕ್ಕ ದುಗ್ಗಳೆಯು ನೀಲಲೋಚನೆ ಚಲ್ವ। ಸೂಳೆ ನಂಬಿಯು ಕಮಳೆ ಸೋಮವ್ವೆಯ || ಕಾಳು ಜೈನನ ಬಿಟ್ಟ ಲೋಲವ್ವೆ ಜವ್ವೆಯ । ಆಳುಗಳು ನಮಗಿನ್ನು ಸರಿಯದಾರು ||೧೩|| ಅಕ್ಕನಾಗಮ್ಮ ಸತ್ಯಕ್ಕ ಚಂಗಳೆ ಚಲ್ವ । ಅಕ್ಕರೆಯ ಮಹಾದೇವಿ ಸುಗ್ಗವ್ವೆಯ || ಚಿಕ್ಕ ಕೊಡಗೂಸಿ ನವ ಅಕ್ಕರಿನ ತೊತ್ತಿನಾ । ಮಕ್ಕಳಪ್ಪೆವು ನಮಗೆ ಸರಿಯದಾರು ||೧೪|| ಇಂತಪ್ಪವರ ಬಂಟ ನಿಂತು ಭವದಲಿ ಬಂದ । ನಂತೆ ಎಂದರೆ ನಿಮಗೆ ಕೊರತೆಯಯ್ಯ || ಮುಂತೆ ನಮ್ಮವನೆಂದು ಸಂತೋಷದಿಂದಪ್ಪು । ಕಂತು ಹರ ಶಿವಷಡಕ್ಷರಿ ಲಿಂಗವೇ ||೧೫||

೬೯

ಡಿಂಭದೊಳಗೆ ಒಂದು ಪ್ರಾಣ ಕಂಭ ಸೂತ್ರಗೊಂಬೆಯಂತೆ । ಎಂದಿಗಾದರೊಂದು ದಿನವು ಸಾವು ತಪ್ಪದು ||ಪಲ್ಲ|| ಹುಟ್ಟುತೇನು ತರಲುಯಿಲ್ಲ ಹೋಗುತೇನು ಒಯ್ಯಲಿಲ್ಲ । ಸುಟ್ಟ ಸುಣ್ಣದ್ಹರಳಿನಂತೆ ಆಯುತ್ತೈ ದೇಹ || ಹೊಟ್ಟೆ ಬಹಳ ಕೆಟ್ಟದೆಂದು ಎಷ್ಟು ಕಷ್ಟ ಪಟ್ಟೆ ಪ್ರಾಣ ಬಿಟ್ಟು ಹೋಗುವಾಗ ಒಂದು ಬಟ್ಟೆಯಿಲ್ಲವು ||೧|| ಹೊನ್ನು ಹೆಣ್ಣು ಮಣ್ಣು ಮೂರು ತನ್ನೊಳಿರ್ದು ಉಣ್ಣಲಿಲ್ಲ । ಅಣ್ಣ ತಮ್ಮ ತಂದೆ ತಾಯಿ ಬಗೆಯಲಿಲ್ಲವು || ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವನರಿಯಲಿಲ್ಲ । ಮಣ್ಣು ಪಾಲದಾದ ಮೇಲೆ ಯಾರಿಗಾಯಿತು ||೨|| ಹತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾಲದೆಂದು ಪರರ । ಸೊತ್ತಿಗಾಗಿ ಆಸೆ ಮಾಡಿ ನ್ಯಾಯ ಮಾಡುವ || ಬಿತ್ತಿ ಬೆಳೆದು ಉಂಡೆನೆಂಬ ವ್ಯರ್ಥ ಚಿಂತೆ ಮಾಡದಿರಲೋ । ಸತ್ತು ಹೋದ ಮೇಲೆ ನಿನ್ನ ಅರ್ಥದಾರಿಗೆ ||೩|| ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆವಸ್ತ್ರ ತೊಟ್ಟುಕೊಂಡು। ಒಳ್ಳೆ ಚಲುವ ಬೊಂಬೆಯಂತೆ ಆಡಿಹೋದೆಲೋ ಹಳ್ಳ ಹರಿದ ಮೇಲೆ ನೀರ ಗುಳ್ಳೆಯುರಳಿ ಹೋದ ತೆರದಿ । ಸುಳ್ಳು ರೂಪು ಸಂಸ್ಕೃತಿಯನು ನೋಡಿರಕ್ಕಟಾ ||೪|| ಸತ್ಯನೆನಿಸಿಕೊಂಡು ಜನರ ತಥ್ಯ ವಾಕ್ಯದಲ್ಲಿ ನೀನು । ಮುಕ್ತಿಯಾದ ಮೇಲೆ ನಿನಗೆ ಸ್ತೋತ್ರ ಮಾಳ್ಪರು || ನಿತ್ಯ ಷಡಕ್ಷರಿಬಲಿಂಗ ದೊತ್ತು ಮಾಗಿ ಭಜಿಸು ನಿನಗೆ । ಉತ್ತಮತ್ವ ಪದವಿ ದೊರಕಿ ಸುಖಿಸೆ ಸಂತತಂ ||೫||

೭೦

ಇಂದ್ರಿಯಂಗಳಿಚ್ಛೆಗಳಿಗೆ ಮುಂದುವರಿದು ಮನವು ಕೆಟ್ಟು । ಇಂದುಧರನ ಕಡೆಗೆ ಮುಖವದಾಗಲೀಯದು ॥ಪಲ್ಲ॥ ಪಿಕನ ಚಲ್ವಗಾನ ಧ್ವನಿಯು। ಶುಕನ ಶಿಶುವಿನಂತೆ ನುಡಿವ । ಸಖಿಯರುಗಳ ನುಡಿಗೆ ಕಿವಿಯು ಕಿವುಡು ಬೀಳಲ್ಕೆ। ಸಕಲ ಶಿವನ ಶಾಸ್ತ್ರಗಳನು ಪ್ರಕಟವಾಗಿ ಕೇಳಿ ಕೇಳಿ ಸುಖಿಸುವುದಕೆ ಎನ್ನ ಶ್ರೋತ್ರ ವಿಕಸವಾಗಲ್ಕೆ ॥೧॥ ಹೊನ್ನಿನಲಗಿನಂತೆ ಹೊಳೆವ। ಕನ್ನೆಯರುಗಳಂಗ ಸೋಂಕ । ಲೆನ್ನ ತನುವು ಕಲ್ಲು ಮರನ ಭಾವವಾಗಲ್ಕೆ ॥ ಚನ್ನ ಶಿವನ ಚರಣ ಧೂಳಿ। ಯನ್ನು ಪೂಸಿ ಹೊರಳುವುದಕೆ ॥ ಎನ್ನ ತನುವು ಉಬ್ಬಿ ಕೊಬ್ಬಿ ವಿಕಸವಾಗಲ್ಕೆ ॥೨॥ ತೊಳಪಗಣ್ಣ ಕಳಶಕುಚದ ಎಳೆಯ ಪೆಣ್ಣ ನೋಡುವುದಕೆ ಹೊಳೆವ ನಯನವೆರಡು ಎನಗೆ ಕುರುಡು ಬೀಳಲ್ಕೆ॥ ಎಳೆಯ ಚಂದ್ರಧರನ ಚಲುವ ನಲಸ ದೊಲಿದು ನೋಡುವುದಕೆ ॥ ಕಳಿಗಳಾಗಿ ಎನ್ನ ನಯನ ವಿಕಸವಾಗಲ್ಕೆ ॥೩॥ ಅಂಬುಜಾಕ್ಷಿಯರುಗಳಧರ । ಚುಂಬನಕ್ಕೆ ಎನ್ನ ಜಿಹ್ವೆ । ಹಂಬಲಿಸಿದ ಹಾಗೆ ಸೀಳಿಪುಗಳವೇಳಲ್ಕೆ ॥ ನಂಬಿ ಶಿವನ ಶರಣರುಗಳ । ತಂಬುಲವನು ಸವಿವುದಕ್ಕೆ ॥ ಅಂಬುರುಹದ ತೆರದಿ ಜಿಹ್ವೆ ವಿಕಸವಾಗಲ್ಕೆ ॥೪॥ ಅಂಗನೆಯರು ತೊಡೆದು ಸೂಡಿ । ದಂಗ ಪುಷ್ಪವಾಸಿಸುವಡೆ ॥ ಹಿಂಗದೆನ್ನ ನಾಸಪುಟಕೆ ನೆಗಡಿಯಾಗಲಿ ॥ ಮಂಗಳಾತ್ಮ ಷಡಕ್ಷರಿಯ । ಲಿಂಗದಂಘ್ರಿಗಿತ್ತ ಕುಸುಮ । ಹಾಂಗೆ ವಾಸಿಸುವರೆ ಘ್ರಾಣ ವಿಕಸವಾಗಲ್ಕೆ ॥೫॥

೭೧

ಎನಗೆ ನಿಮ್ಮನೆ ನೆನೆವ ಮನವನೇ ಬಯಸುವೆನು । ಘನವಾಗಿ ಇದರಿಂದ ಮೇಲರಿಯೆನು ॥ಪಲ್ಲ॥ ನಿಮ್ಮ ನೆನೆವುದೆ ಹರುಷ । ನಿಮ್ಮ ನೆನೆವುದೆ ಪರುಷ । ನಿಮ್ಮ ನೆನೆವುದೆ ಕಾಮಧೇನುವೆನಗೆ ॥ ನಿಮ್ಮ ನೆನೆವುದೆ ಗತಿಯು । ನಿಮ್ಮ ನೆನೆವುದೆ ಮತಿಯು । ನಿಮ್ಮ ನೆನೆವುದೆ ಇಹದ ಪರದ ಸುಖವು ॥೧॥ ನಿಮ್ಮ ನೆನೆವುದೆ ಜಪವು । ನಿಮ್ಮ ನೆನೆವುದೆ ತಪವು ನಿಮ್ಮ ನೆನೆವುದೆ ಸಕಲ ಪರಮ ತತ್ವ ॥ ನಿಮ್ಮ ನೆನೆವುದೆ ನಿತ್ಯ । ನಿಮ್ಮ ನೆನೆವುದ ಸತ್ಯ । ನಿಮ್ಮ ನೆನೆವುದೆ ವ್ಯಕ್ತ ಕೈಲಾಸವು ॥೨॥ ತನು ದಂಡನೆಯ ಮಾಡಿ । ದಿನುಗಲೇತಕೆ ನಾನು । ಘನಗಿರಿಯ ಮೇಲೆ ತಪವಿರಲೇತಕೆ ॥ ಮನಸಿ

ಜಾರಿಯೆ ನಿನ್ನ । ನೆನಹು ಮನದೊಳು ನೆಲಿಸೆ । ಘನಪರಮ ಕೈಲಾಸ ತನ್ನೊಳಿಹುದು ||೩|| ಹಲವು ತೀರ್ಥವು ಕ್ಷೇತ್ರ । ಹಲವು ಗಿರಿಗಹ್ವರವು । ತೊಳಲಿ ಬಳಲುತ್ತಲಿರಲೇಕೆ ದೇವಾ || ಮುಪುರಹರನ ನೆನಹು ತಾ । ನೆಲಿಸಿರಲು ಮನದೊಳಗೆ । ಹಲವನರಸುವದೇನು ತಾನೆ ಶಿವನು ||೪|| ಸುರಲೋಕವೇನೆನಗೆ । ನರಲೋಕವೇನೆನಗೆ । ಉರಗಮುಖಲೋಕ ತಾನಾದಡೇನು || ಗುರುಷಡಕ್ಷರಿವರನ । ಪರಮ ಮಂತ್ರದ ನೆನಹು । ಮೊರೆಕೊಳಲು ಶಿವಲೋಕ ತಾನಿಪ್ಪುದು ||೫||

೭೨

ಭವಕಾಟಕಾರದಲಿ । ಶಿವಶರಣರ ಮನೆಯ । ತನೆದ್ವಾರದೊಳು ಬಿದ್ದೆನುಳುಹಿರಯ್ಯ ||ಪಲ್ಲ|| ಹೇಸಿ ಮಾನವ ನಾನು । ಘಾಸಿಯಂತಪನಲ್ಲ । ಈಶನೊಳು ಸಲುಗೆಯೆನಗೆಂತಪ್ಪುದೋ || ಘಾಸಿಯಾದೆನು ಭವದಿ । ಓಸರಿಸದೆ ಎನ್ನ । ಈಶನಂಘ್ರಿಗೆ ಒಲಿದು ಸಲಿಸಿರಯ್ಯ ||೧|| ಉದ್ಧರಿಸುವರ ಕಾಣೆ । ಇದ್ದೆಸೆಯ ಕೆಡಿಸಿದೆನು । ಹೊದ್ದುವೆನು ಇನ್ನಾವ ದೆಸೆಯ ನಾನು || ಬಿದ್ದೆ ನಿಮ್ಮಂಘ್ರಿಗಳದಿ । ಉದ್ಧರಿಸಿಯುಲ್ಲದೊಡೆ । ಒದ್ದು ಕಡೆಗೆನ್ನ ನೂಕಿರಯ್ಯ ||೨|| ನೀತಿಯರಿಯದೆ ನಾನು । ಪಾತಕದ ನಡೆಯುಲ್ಲ । ಭೂತಳದೊಳಂ ನಡೆದ ಗತಿಯಾವದು || ಓತು ಕರುಣಿಸಿ ನೀವು । ಪಾತಕಾಭ್ರಕೆ ಜಂಝು । ವಾತವೆಂಬುದ ಕೇಳಿ ಬಂದೆ ನಾನು ||೩|| ತಪ್ಪು ನೋಡದೆ ಎನ್ನ । ಒಪ್ಪವಿಟ್ಟು ನಡಿಸಿ । ತಿಪ್ಪೆಯನು ಬಗೆದಲ್ಲಿ ಏನಿಪ್ಪುದು || ಸರ್ಪಧರ ನಿಮ್ಮಗಂಜಿ । ಇಪ್ಪೆನಾಗಿಯು ನಿಮಗೆ । ಅಪ್ಪದಪ್ಪದಮೊಂದು ಉಂಟೆ ಹೇಳಿ ||೪|| ಎಲ್ಲ ಪುರಾತನರು । ಎಲ್ಲಿ ನೆನೆವಲ್ಲಿ ಎನ್ನಕ್ಷಿ ಇಪ್ಪುವ ನಾನು ಬಲ್ಲೆನಾಗಿ || ಇಲ್ಲಿನತನಾಗಿ ನಾ । ನಿಲ್ಲಿ ಕೃಪೆಯನು ಪಡೆವೆ । ಸಲ್ಲಲಿತ ಶಿವಷಡಕ್ಷರಿ ಲಿಂಗವೆ ||೫||

೭೩

ಹರನೆ ನಾನಿಮ್ಮಲ್ಲಿ । ವರವ ಬೇಡುವೆನೊಂದ ಶರಣರಿಂಗೆ ಭೃತ್ಯನಾಗಿರಿಸೆನ್ನನು ||ಪಲ್ಲ|| ಅವರಲ್ಲಿ ಶಿವನಿಹನು । ಶಿವನಿವರೊಡನಿಲ್ಲ ತಾ । ತನೆ ಸಕಲ ಶರಣಗಣ ಮೆರೆದಿಪ್ಪುದು || ಅವರ ಅಂಗಳ ನಿತ್ಯ । ಶಿವಲೋಕವಾಗಿಹುದು । ಅವರ ಘನಕಿನ್ನೇನ ಸರಿಯ ಕಾಣೆ ||೧|| ಅವರ ಕಿಂಕರನಾಗಿ ।

ಅವರ ಪಾದವ ತೊಳೆದು । ಅವರ ಪಡುಗೆಯ ಬೆಳಗಿ ತೊಳೆದು ತಂದು ॥ ಅವರ ಹಾವುಗೆವಿಡಿದು । ಅವರಡಿಗಳನು ಒರೆಸಿ । ಅವರಿಚ್ಛೆಯೊಳಗಿರ್ಪ ವರವ ಶಿವನೆ ॥೨॥ ಅವರುಂಡು ಮಿಕ್ಕುದನು । ಅವರುಟ್ಟು ಬಿಟ್ಟುದನು । ಅವರುಗಿದ ತಾಂಬುಲವ ಸವಿದು ನಾನು ॥ ಅವರಂಗಳವ ಗುಡಿಸಿ । ಅವರ ಬಾಗಿಲ ಕಾಯ್ದು ಅವರ ಕೀಳಲಿ ಸೇರಿ ಕೊಂಡಿರ್ಪುದ ॥೩॥ ಅವರ ಎತ್ತಾಗಿ ನಾ । ನವರ ತೊತ್ತಾಗಿ ನಾ । ನವರ ಪಶುವಾಗಿ ನಾ । ಸುಖದಿರ್ಪುದ ॥ ಅವರ ಬಾಗಿಲೊಳಿರ್ಪ । ತವೆ ಸೊಣಗ ನಾನಾಗಿ । ಅವರ ಚರಣದ ಧೂಳಿ ತೊಡೆದಿರ್ಪುದ ॥೪॥ ಶಿವ ನಿಮ್ಮ ಘನದಿಂದ । ಅವರ ಘನವತ್ಯಧಿಕ । ಅವ ರಂಗಳ ದ್ವಿತೀಯ ಕೈಲಾಸವು ॥ ಅವರ ನಾ ಭವಭವದಿ । ತವೆ ಬಿಡದೆ ಇರ್ಪುದನು । ಶಿವಷಡಕ್ಷರಿವರನೆ ಪಾಲಿಸೆನಗೆ ॥೫॥

೭೪

ತಪದ ವಿದ್ಯೆ ಸಾಸಯೋಗ । ಜಪವ ವ್ರತವ ನುಡಿಸಬಹುದು । ಗುಪಿತ ಲಿಂಗದಲ್ಲಿ ಮನವನಿಡಲಿಕಾಗದು ॥ಪಲ್ಲ॥ ಶೈಲ ತಟಗಳಲ್ಲಿ ಪರ್ಣ । ಶಾಲೆಯನು ಕಟ್ಟಿ ಕಂದ । ಮೂಲ ಫಲವ ಸವಿದು ತಪವ ಮಾಡಿ ವಿದ್ಯದ॥ ಜಾಲವನ್ನು ಕಲಿತು ಇಂದ್ರ । ಜಾಲಗಳನು ತೋರಬಹುದು । ಮೇಲೆ ಲಿಂಗ ದಲ್ಲಿ ಮನವನಿಡಲಿಕಾಗದು ॥೧॥ ದೂರ ದೃಷ್ಟಿ ದೂರ ಶ್ರವಣ । ಮಾರಣಾದಿ ಮಂತ್ರ ತಂತ್ರ ಏರಿ ಗಗನದಲ್ಲಿ ಚರಿಸೆ ತನ್ನ ಆಲಿಗೆ॥ ತೋರುವದನು ಪಡೆಯ ಬಹುದು । ಮಾರಿ ಯಕ್ಷಿಣಿಯರ ರಚಿಸಿ । ಸೇರಿ ಲಿಂಗದಲ್ಲಿ ಮನವನಿಡಲಿಕಾ ಗದು ॥೨॥ ಹುಲಿಯ ಕೂಡ ಸೆಣಿಸಬಹುದು । ಮಲೆತ ಗಜದ ಇದಿರಿನಲ್ಲಿ । ಚಲಿಸದಂತೆ ನಿಂದು ಕಾದಬಹುದು ಸಿಂಹದ ॥ ಅಲಗಬಹುದು ಮೀಸೆಯನ್ನು ಉಳಿದ ಸಾಸವಂತದಿರಲಿ । ಒಲಿದು ಲಿಂಗದಲ್ಲಿ ಮನವನಿಡಲಿಕಾಗದು ॥೩॥ ಕುಂಭಕಾದಿ ಯೋಗದಿಂದ । ಕುಂಭಿಣಿಯನು ಸಹಜ ಬಿಟ್ಟು । ಅಂಬರವನು ಏರಬಹುದು ಆದಿಯಿಲ್ಲದೆ ॥ ಸಂಭ್ರಮದಲಿ ನಿತ್ಯಕೋಟಿ । ತುಂಬ ಜಪವ ನಡಿಸಬಹುದು । ನಂಬಿ ಲಿಂಗದಲ್ಲಿ ಮನವನಿಡಲಿಕಾಗದು ॥೪॥ ಅನ್ಯ ವಾಕ್ಯ ಅನ್ಯ ಜಪವ । ನನ್ಯದೈವಗಳನು ಬಿಟ್ಟು ಉನ್ನತದಲಿ ನಡಿಸಬಹುದು ಸಕಲ ವ್ರತವನು ॥ ಚೆನ್ನ ಷಡಕ್ಷರಾಂಕಲಿಂಗ । ತನ್ನ ತಾನೆ ಒಲಿಯದನಕ । ಇನ್ನು ಲಿಂಗದಲ್ಲಿ ಮನವನಿಡಲಿಕಾಗದು ॥೫॥

೭೫

ಹುಲಿಯು ಕರಡಿ ಕರಿಯು ಫಣಿಯು ಬಲುಹಿನಿಂದಲಾಳ್ವರುಂಟು । ಚಲಿಸದಂತೆ ಮನವನಾಳ್ವರಾರ ಕಾಣೆನು ॥ಪಲ್ಲ॥ ಮೊರೆದು ಗರ್ಜಿಸುತ್ತ ಬರುವ । ಹಿರಿಯ ಹುಲಿಯ ಹಿಡಿದು ತಂದು । ಇರದೆ ತಮ್ಮ ಇಚ್ಛೆಯಲ್ಲಿ ಆಳುತಿರ್ಪರು ॥ ಚರಿಸುತಿಪ್ಪ ಕಿರಿಯ ಮನವ । ಪರಮ ಲಿಂಗದಲ್ಲಿ ಇರಿಸಿ । ಹರಿಯದಂತೆ ಆಳ್ವ ಹಿರಿಯರುಗಳ ಕಾಣೆನು. ॥೧॥ ಕರಿಯ ಹಿಡಿದು ನಿಲಿಸಬಹುದು । ಕರಡಿಯನ್ನು ಕಟ್ಟಬಹುದು । ಮೊರೆವ ಫಣಿಯ ಹೆಡೆಯ ಕೈಯೊಳಿರಿಸಬಹುದೆಲ್ಲೈ ॥ ಕಿರಿಯ ಮನವ ಹಿಡಿದು ತಂದು । ಇರಿಸಿ ಲಿಂಗದಲ್ಲಿ ನೆರೆವ । ಹಿರಿಯರುಗಳ ಕಾಣೆ ಬರಿಯ ಬಲ್ಮೆ ನುಡಿವರು ॥೨॥ ಹರಿಸುರೇಂದ್ರ ದಿವಿಜರುಗಳ । ಪರಮಯೋಗಿ ಮನುಮುನಿಗಳ । ಮರೆವೆಯೆಂಬ ಕೂಪದಲ್ಲಿ ಇಕ್ಕಿ ತುಳಿವುದು ॥ ಹಿರಿಯ ಧ್ಯಾನಿ ಮೌನಿಯೆಂಬ ಹಿರಿಯರುಗಳನೆಲ್ಲರನ್ನು । ಆರಿವು ಮರೆವೆಯಲ್ಲಿಯಿಕ್ಕಿ ನುಸುಳಿ ಪೋಪುದು ॥೩॥ ಜಪದ ಬಲುಮೆಯಲ್ಲಿ ಇರದು । ತಪದ ಉಗ್ರಕಂಜಿ ನಿಲದು । ಆಪರಿಮಿತದ ಶಾಸ್ತ್ರಪಾಠಕರಿಗೆ ಸಿಲುಕದು ॥ ಚಪಲತನದಿ ಹಿಡಿವೆನೆನಲು । ಉಪರಿಯಾಗಿ ನಿಲುಕದಿಹುದು । ಕುಪಿತ ಮನವ ಹಿಡಿವ ಪರಿಗಳಾವುವೆಂದೊಡೆ ॥೪॥ ಮುನ್ನ ತಾನು ಯಾರು ಎಂದು । ತನ್ನ ನಿಜವನರಿದ ಬಳಿಕ ಚನ್ನ ಷಡಕ್ಷರಿಯ ಲಿಂಗ ತಾನೆಯಾಗಿಹೆ ॥ ಇನ್ನು ಸರ್ವಜಗವದೆಲ್ಲ । ತನ್ನ ನಿಲುವೆಯಾಗಿ ತಾಗಿ । ಅನ್ಯವಿಲ್ಲವಾಗಿ ಮನವ ತಾನೆ ನಿಲುವದು ॥೫॥

೭೬

ಚಂದ್ರಧರನಿಗೊಲಿಯದಿರ್ಪ । ಇಂದ್ರಿಯಗಳ ಜಯಿಸದನಕ । ಸಾಂದ್ರವಾದ ಕೋಪವೆನಗೆ ಲೋಪವಾಗದು ॥ಪಲ್ಲ॥ ದುಷ್ಟ ನುಡಿಯ ಬಿಡದೆ ಒಲಿದು । ಮುಟ್ಟಿ ಕೇಳ್ವ ಹಾಗೆ ಶಿವನ । ಶ್ರೇಷ್ಠವಾದ ಶಾಸ್ತ್ರ ಕೇಳದಿರ್ಪ ಕಿವಿಯೊಳು ॥ ಇಟ್ಟ ಮೊಳೆಯ ಕೊಡತಿಯಿಂದ ! ತಟ್ಟೆ ಆಚೆ ಈಚೆ ಗಾಗು । ವಸ್ತು ಬಡಿಯದನಕ ಎನ್ನ ಸಿಟ್ಟು ಹೋಗದು ॥೧॥ ಮೆಚ್ಚಿ ಶಿವನ ಸೋಂಕಿ ಸೊಕ್ಕಿ ಹೆಚ್ಚಿ ಪುಳಕವೇರದೊಲಿದು । ನಿಚ್ಚಲನ್ಯ ಸೋಂಕುಗಳಿಗೆ ಎಳೆವ ತ್ವಕ್ಕನು ॥ ಕೊಚ್ಚಿ ಕೊಚ್ಚಿ ಕಡಿದು ಕಡಿದು । ನುಚ್ಚು ನುರಿಯ ಮಾಡದನಕ । ಕೆಚ್ಚುಗೊಂಡ ಕೋಪದುರಿಯ ಕಿಚ್ಚು ಪೋಗದು ॥೨॥ ಬಿಡದೆ

ಲಿಂಗವನ್ನು ನೋಡ । ಲೊಡನೆಯುಶ್ರುಜಲಗಳುಕ್ಕಿ । ಕಡೆಗೆ ಪರಿಯದನ್ನ ರೂಪ ನೋಳ್ಪ ನಯನಕೆ ॥ ಒಡೆಯ ಹೆಟ್ಟಿ ಮಳಲ ತಂದು । ಕೆಡಹಿ ಹೊಯ್ದು ದಸಿಗಳಲ್ಲಿ । ಜಡಿಯುದನಕ । ಎನ್ನ ಕೋಪವಡಗಿ ಪೋಗದು ॥೩॥ ಶೂಲಧರನ ಹಾಡಿಹಾಡಿ । ಲೀಲೆ ಮಿಕ್ಕು ಹೊಗಳದನ್ನ । ಕಾಳುನುಡಿಯ ಹಗಲು ಇರುಳು ನುಡಿವ ಜಿಹ್ವೆಯು ॥ ಸೀಳಿ ಸೀಳಿ ಹೋಳು ಮಾಡಿ । ಮೇಲೆ ಸುಣ್ಣ ನೀರನೆರೆದು । ಮಾಲೆಗಟ್ಟದನಕ ಮನದ ಜ್ವಾಲೆ ಹೋಗದು ॥೪॥ ಲಿಂಗಕೀಯದಿರುವ ಅರಳ । ಭೃಂಗದಂತೆ ಅರಿವ ಮೂಗ । ಹಾಂಗೆ ಸೀಳದನಕ ಕೋಪ ಹರಿದು ಹೋಗದು ॥ ಮಂಗಳಾತ್ಮ ಷಡಕ್ಷರಿಯು । ಲಿಂಗ ನಡಿಗೆ ಒಲಿಯುದಿಂದ್ರಿಯಂಗಳಳಿಯದನಕ ಸುಖವು ಸಾಂಗವಾಗದು ॥೫॥

೭೭

ನಾನು ಒಲಿದು ಫಲವದೇನು । ನೀನು ಒಲಿಯುದನಕ ಶಿವನೆ। ಏನು ಮಾಡಿ ಫಲವದೇನು ಬಯಲ ಭ್ರಮೆಯುದು. ॥ಪಲ್ಲ॥ ಜಪವ ಮಾಡಿ ಫಲವದೇನು । ತಪವ ಮಾಡಿ ಫಲವದೇನು । ಅಪರಿಮಿತ ಶಾಸ್ತ್ರ ಪಠಿಸಿ ಫಲವದೇನಲ್ಲೈ ॥ ತ್ರಿಪುರ ವೈರಿ ತನ್ನ ತಾನೆ । ಸುಪಥದೋರಿ ಒಲಿಯುದನಕ । ಉಪಮೆಯಿಂದ ಮಾಡೆ ತುದಿಗೆ ಕೆಟ್ಟು ಪೋಪುದು ॥೧॥ ಹೆಣ್ಣು ಬಿಟ್ಟು ಫಲವದೇನು ಹೊನ್ನ ಬಿಟ್ಟು ಫಲವದೇನು । ಮಣ್ಣನುಳಿದು ಬಡವನಾಗಿ ಫಲವದೇನಲ್ಲೈ ॥ ಪನ್ನಗೇಂದ್ರಭರಣನೊಲಿದು । ತನ್ನ ಸುಪಥ ತೋರದನಕ । ಅನ್ಯರುಗಳ ನೋಡಿ ಮಾಡೆ ಕೆಟ್ಟು ಪೋಪುದು ॥೨॥ ಗಿರಿಗಳಲ್ಲಿ ಗವಿಗಳಲ್ಲಿ ತರುಗಳಲ್ಲಿ ಸೇರೆ ತನುವ । ಮರೆದು ಅಸ್ಥಿ ಮಾತ್ರವಿರಲು ಫಲವದೇನದು ॥ ಹರನು ತನ್ನ ತಾನೆ ಒಲಿದು । ಪರಮ ಸುಖವ ತೋರದನಕ । ಪರರ ನೋಡಿ ಮಾಡೆ ಕಡೆಗೆ । ಕೆಟ್ಟು ಪೋಪುದೈ ॥೩॥ ಕೋಡುಗಲ್ಲ ತುದಿಯಮೇಲೆ । ನೀಡಿಕಾಲ ಗಗನಕಾಗಿ ಕೂಡೆ ಉಗ್ರ ತಪವಮಾಡಿ ಫಲವದೇನಲ್ಲೈ ॥ ರೂಢಿಗೀಶ ಕರುಣಹುಟ್ಟಿ । ನೋಡಿ ಒಲಿಯುದನಕ ಪರರ । ನೋಡಿ ಮಾಡಲೆಲ್ಲ ಕಡೆಗೆ ಕೆಟ್ಟು ಪೋಪುದು ॥೪॥ ಮುನ್ನ ಮಾಡಿದವರ ಕಂಡು । ಇನ್ನು ನೋಡಿ ಮಾಡಿ ಬಹಳ । ಬನ್ನ ಬಡುತ ಇರಲು ಕಡೆಗೆ ಕೆಟ್ಟು ಪೋಪುದೈ ॥ ತನ್ನ ತಾನೆ ಪಕ್ವವಾಗಿ । ತನ್ನ ತಾನೆ ಪಥಕೆ ಬರಲು । ಚನ್ನ ಷಡಕ್ಷರಿಯ ಲಿಂಗ ತಾನೇ ಒಲಿವನು ॥೫॥

೭೮

ಏನು ಮಾಡಲಯ್ಯ ಎನ್ನ । ಹೀನ ಮನದ ಬಯಕೆಗಳನು ಜ್ಞಾನ ಖಡ್ಗದಿಂದ ಕಡಿವರಾರ ಕಾಣೆನು ॥ಪಲ್ಲ॥ ಹಿಡಿವುದದನ ಹಿಡಿಯುದಯ್ಯ ಹಿಡಿಯುದದನೆ ಹಿಡಿವುದಯ್ಯ । ಕೆಡುವ ನಡೆಯ ನಡೆಸಿಯನ್ನ । ಭವಕೆ ಬರಿಸಿತು ॥ ಬಡವ ನಾನು ಕಾಡುತಿಹುದು । ಹಿಡಿಯುವವರ ಕಾಣೆ ನಾನು ಕಡಿದು ಕಡಿದು ಹಾಕುವವರನಾರ ಕಾಣೆನು ॥೧॥ ನಾನು ನಿಮ್ಮ ನೆನೆ ವೆನೆನಲು । ತಾನು ನಿಮ್ಮ ನೆನೆಯುದಯ್ಯ । ಶ್ವಾನನಂತೆ ಹಲವು ಕಡೆಗೆ ಹರಿಯುತಿರ್ಪುದು ॥ ಧ್ಯಾನ ಮೌನ ಜಪದೊಳಿರದು । ನಾನು ಇದರ ಸಂಗ ದಿಂದ । ಜ್ಞಾನ ಹೀನನಾಗಿ ಹೋದೆನಕ್ಕಟಕ್ಕಟ ॥೨॥ ಅಂಗಗುಣದ ನಡೆ ಗಳೆನಲು । ಹಿಂಗಿಸುತ್ತ ಬರುತಲಿಹುದು । ಲಿಂಗನೆನಹು ಎನಲು ಎಲ್ಲೊ ನುಸುಳಿ ಪೋಪುದು ॥ ಮಂಗಳಾತ್ಮ ಷಡಕ್ಷರಿಯ । ಲಿಂಗ ನಿಮ್ಮ ನೆನೆಯ ದಿರ್ಪ । ಕೊಂಗು ಮನವ ಶಿಕ್ಷಿಸೆನ್ನ ಆಳಲು ಪೋಗಲಿ ॥೩॥

೭೯

ಕಂಗೆಡಲೇತಕೆ ಕಳವಳಿಸಿಯನಾ । ನಂಗಜಮಾಯೆಯ ಮನದಬ್ಬರ ಕಂ । ಲಿಂಗದ ಸೂತ್ರವ ಕರದಲಿ ಪಿಡಿದಿರಲೇತರ ಭಯಮೆಮಗೆ ॥ಪಲ್ಲ॥ ಅಂಧಕನಿಗೆ ಸತ್ಪಥವನು ತೋರುವ । ಚಂದದಿ ಮೂಕಗೆ ಮಾತು ಜೀವಿತ। ಸಿಂಧುವಿನೊಳಗಣ ಹೊಳವನು ತಪ್ಪಿಸಿ ಪಥವನು ತೋರ್ಪಂತೆ ॥ ಹಿಂದಣ ವಾಸನೆಯನು ಪರಿಹರಿಸುವ । ಮುಂದಣ ಸದ್ಗತಿಯನು ತೋರುವ ಘನ । ಸಂದಪುರಾತರ ವಚನಗಳಿರುತಿರೆ ಏತರ ಭಯಮೆಮಗೆ ॥೧॥ ವರಸಂಜೀವನ ದೌಷಧವಿರುತಿರೆ । ಮರಣದ ಭೀತಿಗೆ ಅಂಜಲದೇತಕೆ । ಪರುಷದ ಖಣಿತಾ ತಮ್ಮನೆಯೊಳಗಿರುತಿರೆ । ಬಡತನಕ್ಕಂಜುವರೆ ಶರಣರ ನಿಧಿಯಂದೆನಿಸುವ ಷಂಚಾ । ಕ್ಷರಿ ಜಿಹ್ವಾಗ್ರದ ಕೊನೆಯೊಳಗಿರುತಿರೆ ದುರಿತಕ್ಕಂಜುವರೆ ॥ ಬಡ ಮನವೇ ನಂಬಿರು ಭಯಬೇಡ ॥೨॥ ಅಮೃತಾಂಬುಧಿಯಿರೆ ಹಸಿವಿನ ಭಯವೆ । ದ್ಯುಮಣಿಯು ತಾನಿರೆ ತಿಮಿರದ ಭಯವೇ । ಹಿಮಭಯವೇತಕೆ ತಾನಗ್ನಿಯ ಸನ್ನಿಧಿಯಲಿ ಮೂರ್ತವ ಮಾಡಿ ॥ ಕ್ರಮಗೆಡಲೇತಕೆ ಚಿದ್ಘನ ಮೂರುತಿ । ಅಮಲ ನಿರಾಮಯ ನಿರ್ಗುಣ ನಿಷ್ಕಲ ಅಮಲ ಷಡಕ್ಷರಿ ಲಿಂಗವು ಇರುತಿರಲೇತರ ಭಯ ನಮಗೆ ॥೩॥

೮೦

ಎಲೆ ಮಾನವನೆ ಕೇಳು ಸ್ಥಿರವೆಂದು ಸಂಸಾರ। ಮಲದೇಹವನು ಮೆಚ್ಚಿ ಕೆಡಬೇಡ ಬರಿದೆ ||ಪಲ್ಲ|| ನಾರಿ ನಿನ್ನವಳಲ್ಲ ಹೇಮ ನಿನ್ನದು ಅಲ್ಲ । ಧೀರ ಪುತ್ರಾಪ್ತರುಗಳಾರೂ ಅಲ್ಲ || ಸಾರಿ ಹೇಳುವೆನೀಗ ತಿಳಿಯದು ಮುಂದೆ ನೀ । ಘೋರ ನರಕಾರ್ಣವದಿ ಬೀಳ್ವಾಗ ತಿಳಿವೆ ||೧|| ಕದನ ಕರ್ಕಶದಿಂದ ಜರಿದೆ ನೀನನ್ಯರನು । ಮದಸೊಕ್ಕಿದಾನೆಯೊಲ್ ಜ್ಹರಿಯದಿರು ಮನುಜ || ಕುದಿದು ನಾ ಹೆಚ್ಚು ತಾ ಹೆಚ್ಚೆಂದು ಒಣವಾದ । ಪದವಿಗಿದು ತರವಲ್ಲ ಕುತ್ತ ಹುದು ಮುಂದೆ ||೨|| ಗುರು ಹಿರಿಯರನು ಕಂಡು ಕೋಣನಂದದಿ ಮಲೆತು। ಸಿರಬಾಗದಿರೆ ಮುಂದೆ ಘನಬಾಧೆ ಪಡುವೆ || ಮೊರೆವ ಕಾಲನ ಕೈಗೆ ಸೆರೆಯ ಸಿಕ್ಕುವೆ ನೀನು । ಭರದಿ ಮಹಂತೇಶನಡಿವಿಡಿಯೊ ಎಲೆ ಮರುಳೆ ||.||

೮೧

ಯರಗದಿರು ಮನವೆ ನೀ ತನು ವರ್ಣವನು ನೋಡಿ । ತೆರೆಯೆ ಹುಳು ಕುಂಟು ಗುಣವಿಲ್ಲ ನಾರಿಯೊಳು ||ಪಲ್ಲ|| ಒಳಗೆ ನರಮಾಂಸ ಮಜ್ಜದಪುಂಜ ಮೇಲೆ ಬಹು । ಮಲಿನ ಚರ್ಮದ ಹೊದಿಕೆ ಬೇರಿಲ್ಲವು || ಮಲಮೂತ್ರ ತುಂಬಿ ತುಳುಕುವ ದೇಹವನು ಮೆಚ್ಚಿ । ಮಲಹರನ ಮರೆದು ಭವಕಿಳಿಯ ದಿರು ಮನವೆ ||೧|| ಮಾಯೆಯೊಳ್ಳವಳಲ್ಲ ಮೋಹಜಾಲವ ಬೀಸು । ಪಾಯ ದಿಂತನ್ನತ್ತ ಸೆಳೆಯುತಿಹಳು ಹೇಯಮಾಡತಿ ಇವಳ ಸಾಯಗೊಲ್ಲುವಳು ಗುರು । ಕಾಯೆಬಾರಳು ಮುಂದೆ ಜ್ಞಾನವಿರುತಿರಲು ||೨|| ಮುದ್ದು ನುಡಿ ಗಳ ನುಡಿದು ಶುದ್ಧ ವೃಷ್ಟಾನ್ನವನು । ಸದ್ಧರ್ಮದಿಂದ ನೀಡುಣಿಸುತಿಹಳು|| ಸಿದ್ಧ ಮಹಂತೇಶನ ಕುಬುದ್ಧಿಯಿಂದಲೆ ಮರಸಿ । ಬದ್ಧ ಸಂಸಾರದೊಳ್ ಕೆಡಹುತಿಹಳು ||೩||

೮೨

ಜೋಕೆ ಕಂಡ್ಯಾ ಆತ್ಮಾ ಜೋಕೆ । ಆತ್ಮಾ ಜೋಕೆ ಕಂಡ್ಯಾ ಆತ್ಮಾ ಜೋಕೆ || ಕಾಕು ಸ್ತ್ರೀಯರ ಬಳಗವನೇಕ ಬರುತಿಹುದಿಲ್ಲಿ ||ಪಲ್ಲ|| ಮರ ವೆಯ ಮನೆಯೊಳ ಗರುವಿಲ್ಲದಂಗನೆಯರು । ಪರಿಪರಿ ನೆರೆದು ನಿನ್ನ ಮರಳು ಮಾಡುವರಯ್ಯ ||೧|| ವಿರತಿ ವಿರತಿ ಎಂದು ನಿರುತಾಗಿ ನುಡಿವೆ ನೀನು । ವಿರತಿಯೆಂತೆಂಬ ದೃಷ್ಟ ಅರಿತರೆ ತಿಳಿವುದಿಲ್ಲಿ ||೨|| ನೋಡದೆ ನುಡಿ

ಸದೆ ಮಾಡಬಹುದು ವಿರತಿ । ನಾಡರಿಯಲು ಮಹಂತ ಪ್ರೌಢನೊಳ್ ರತಿಯಿರಲಿ ॥೩॥

೮೩

ಸಾಕು ಪರಿಹರಿಸೆನ್ನ ದೇಹದುರ್ಗುಣಗಳನು । ನೂಕು ಸುಗ್ಗನು ಮಾಡಿ ಕಾಡುತಿಹವು ॥ಪಲ್ಲ॥ ಹೊರಗೆ ಕಳ್ಳರ ಬಾಧೆಯೊಳಗೆ ಚೋಳ್ಪಾವು ಮದ । ಕರಿ ನಿಕರ ಬಾಧೆಯನು ತಾಳಲಾರೆ ॥ ನರಿ ಶಾರ್ದೂಲದ ಬಾಧೆ । ಕರಡಿ ಮೃಗಗಳ ಬಾಧೆ । ಪರಿಪರಿಯ ಬಾಧೆಗಳನೇಕ ಶಿವನೆ ॥೧॥ ಕೊಂಬೆ ಕೊಂಬೆಗೆ ಹಾರಿ ಕೋಯೆಂದು ಕೂಗುತಿಹ । ಡೊಂಭನಾ ಬಾಧೆ ತ್ರಿಪುರದಲ್ಲಿರುವ ॥ ಶುಂಭ ದೈತ್ಯರ ಬಾಧೆ ಶಂಬರಾರಿಯ ಬಾಧೆ ! ಸಂಭ್ರಮಿಪ ಘನವನೇನೆಂಬೆ ಶಿವನೆ ॥೨॥ ಸಾಗರಗಳೇಳು ಮೇಲ್ವಪ್ಪಿ ಬರುತಿಹ ಬಾಧೆ । ಬೇಗ ಬೆಂಬಿಡದಟ್ಟಿ ಸುಡುವುದತಿ ಬಾಧೆ ॥ ನೀಗಿಸೈ ಬಾಧೆಗಳ ತಾಪದಲಿ ನೊಂದೆನಾ । ಬೇಗದೊಳನಾಮಿಕ ಮಹಂತಲಿಂಗಾ ॥೩॥

೮೪

ಗುರುವೆ ನಿಮ್ಮ ನಾಮಸೇವೆಯ ಮಾಡುವೆ । ಮೊರೆಯ ಹೊಕ್ಕರೆ ಕಾಯ್ವ ಬಿರುದ ನಿಮ್ಮೊಳು ಕೇಳಿ ॥ಪಲ್ಲ॥ ಶರೀರ ವಿಡಿದಿಹ ಕರ್ಮವೆಸಗಲಾರದೆ ಸರ್ವ । ದುರವೆ ಚೋಹವ ತೊಟ್ಟು ಮರೆಯಲಾರದೆ ನಿಮ್ಮ ॥ ದುರುಳ ಕಾಮ ಕ್ರೋಧದುರಿಯೊಳು ಬೇಯದೆ । ಪರಶಿವಲಿಂಗದ ಪದವ ಕೊಡುವನೆಂದು ॥೧॥ ತಾಯಿಯ ಗರ್ಭದಿ ಜನಿಸಲಾಗದೆ ಮರಳಿ । ಹೇಯವಾಗುವ ಬಾಲಲೀಲೆಯ ತಾಳದೆ ॥ ಪ್ರಾಯಕಾಲದ ಮಾಯೆ ಬಲೆಗೆ ಬೀಳಲಾರದೆ । ಆಯ್ಯ ಗದಗದಿಸಿ ಭಕ್ತಿಪ್ರಿಯ ಸಲಹುವನೆಂದು ॥೨॥ ಅರಿವು ಮರವೆಯ ಸಂತಾಪವನೊಲ್ಲದೆ । ಮರಣ ಬಾಧೆಯ ಮುಪ್ಪಿನ ಹೇಸಿಗೆಯ ತಾಳದೆ ॥ ನರಕ ಮೂತ್ರದೊಳು ಬಿದ್ದು ಸೋತು ಹೊರಳಾಡದೆ । ಕರುಣ ಸಮುದ್ರ ಮಹಂತಲಿಂಗ ನೀನಹುದೆಂದು ॥೩॥

೮೫

ಬೇಡುವೆ ವರವ ನಿಮ್ಮಿಂದ ಕೊಡೊ । ರೂಢಿಗೀಶನೆ ಇದು ಚಂದ ॥ಪಲ್ಲ॥ ಬೇಡನೀ ಕೊಡು ಫಲ ಪದವ ನಾನೊಲ್ಲೆ । ಮಾಡದಿರವ ಮುಕ್ತಿ ಕೊಡುವ ಸುಗುಣವ ॥ಅನುಪಲ್ಲ॥ ವರ ಗುರು ಲಿಂಗಜಂಗಮದಿ ।

ಇರುವ ಭಕ್ತರ ಕಂಡರೆ || ಧರೆಯೊಳಗಾದರೊಮ್ಮೆ ಕೃತ್ಯದಿಂ ಚರಿಸೆನಾ | ಸಿರಬಾಗುವಂತೆ ಮಹಸ್ಥಿರ ಬುದ್ಧಿ ಈಯೋ ||೧|| ಭಕ್ತಿಜ್ಞಾನ ವೈರಾಗ್ಯ ಮೂರು ವ್ಯಕ್ತಿಯಂ ಪಿಡಿದು ಚರಿಸುವ || ಶಕ್ತಿ ರಹಿತ ಮಹಾ ವಿರಕ್ತರುಗಳ ಕಂಡು | ಭಕ್ತಿ ಭಯ ಕಿಂಕರತೆ ಇರುವಂತೆ ಮಾಡೋ ||೨|| ಕಂತು ಮರ್ದನ ಮಹಂತಲಿಂಗ ಇವ | ರೆಂತಿರ್ದರೇನೋ ಭವಭಂಗ | ಅಂತರಂಗ ದಲಿ ಸಂತತವಿರ್ಪೆಯಿವರನೀ | ಅಂತು ಇಂತು ಎಂಬ ಭ್ರಾಂತಿಗುಣ ವಳಿಸೋ ||೩||

೮೬

ನಂಬಿಗೆ ಸಾಲದು ಡಾಂಭಿಕ ಭಕ್ತರ | ಸಾಂಬಸದಾಶಿವ ನನಗಿನ್ನು|| ಕುಂಭಿನಿಯೊಳು ಶಿವನಂಬುಗೆಯಿಲ್ಲದೆ | ಶಂಭು ಭಕ್ತರೆಂದುಸುರುವರು |ಪಲ್ಲ| ಮುಂದೆ ಸ್ತುತಿಸಿ ವೇಣ್ ಹಿಂದೆ ನಿಂದಿಸುವರು | ಚಂದದಿ ನಿಮ್ಮಗಣಂಗ ಳನು || ವಂದಿಸಿ ನಿಂದಿಸಿದಂಧಕ ಭಕ್ತಿಯು | ಎಂದಿಗೆ ಸಲ್ಲುವದೊ ಶಿವ ನಿನಗೆ || ಹೊಂದಿಕೆ ಯಿಲ್ಲದೆ ಸಂದೇಹದಿ ಶರ | ಣೆಂದರೆ ಏನಹುದದರಿಂದ|| ಬಂಧನವಲ್ಲದೆ ಮುಂದಕೆ ಇವರಿಗೆ | ಹೊಂದರು ಸದ್ಗತಿಯನು ಬೇರೆ ||೧|| ಧರೆಯೊಳಗಿರುವತಿ ಸಿರಿವಂತರ ಮನೆಗೆ | ಹರಶರಣರು ಬಂದಿರಲವರು || ಗರಹೊಡೆದಂದದಿ ಸಿರಬಾಗದೆ ತಮ್ಮ | ಭರದೊಳಗಿರುವರು ಲಕ್ಷಿಸರು|| ಹಿರಿ ಹೆಂಡರು ತಮ್ಮ ತುರುಬು ಸಿಂಗರಿಸುವ | ಮರಿಮಕ್ಕಳ ಸಂಭ್ರಮದಿಹರು || ಪರಿಜನರಿಂದಲಿ ಕರಸುತವರು | ಸತ್ಕರಿಸುವರಲ್ಲದೆ ತಾವ್ ಬರರು ||೨|| ಹರ ಶರಣರು ತಮ್ಮ ಸಿರಿಬಂಡ ಕಾಲಕೆ | ಇರುವಿಗೆ ಸಮಮಾಡಿ ಕಾಣುವರು | ಹರಣ ಹೋದರು ಬೇಡ ಹರಸಿರಿಗಾರರು| ಸುರೆಗುಡಿದಂದದೊಳಿರುತಿಹರು|| ದೊರೆ ಮಹಂತೇಶನೆ ಗರ್ವದೊಳಿರುತಿಹ | ಸಿರಿವಂತರ ಮನೆಯನು ಬಿಡಿಸಿ|| ಗುರುಭಕ್ತಿಯನುಳ್ಳ ಕಿರಿಭಕ್ತರ ಮನೆ | ತುರುವ ಕಾವುದು ಬಹುಲೇಸು ಕೊಡೊ ||೩||

೮೭

ಶ್ರೀ ಗುರು ಭಜನೆಯ ಮಾಡುತ ಪರಿಪರಿ ನೀಗುವೆ ಭವಮಾಲೆ ಗಳೀಗ | ಅಗಮವರಿಯದವರು ಮೋಕ್ಷಪ್ರದ ನಾಗಭೂಷಣ ಶರಣರು ಬೇಗ ||ಪಲ್ಲ|| ಬಸವನ ಸಂತತಿ ಪ್ರಭು ಸಂತತಿಗಳ ಹಸನದಿ ಮಹ

ನೀಲಾಂಬಿಕೆಯು । ಕುಶಲತರದ ಮಹದೇವಿಯು ಸಂತತಿ ಪಶುಪತಿ ಶರಣರ ಪಾದವನು ॥೧॥ ಸತ್ಯರ ಭಜನೆಯು ನಿತ್ಯರ ಭಜನೆಯು ನೆತ್ತಿ ಬಾಗಿ ಹಸ್ತವ ಮುಗಿದು । ಉತ್ತಮ ತನದಲಿ ಚಿತ್ತವಿಟ್ಟು ಶಿವಗತ್ತಿಲಿ ಕುಣಿಯುತ ನಾದ ದೊಳು ॥೨॥ ಪರಶಿವ ಜ್ಞಾನಾ ವ್ಯತಗಳ ಕುಡಿಸುವ । ಮರಣರಹಿತ ಮಹಜ್ಞಾನಿಗಳ । ಹರಹರ. ಥೈ ಥೈ ಶಿವಶಿವ ಥೈ ಥೈ ಗುರುಮಹಂತೇಶ ನಮೋ ಎನುತ ॥೩॥

೬೮

ಸುಮ್ಮನಿರು ಕಂಡ್ಯಾ ಶಿವಯೋಗಿ ಮಹಲಿಂಗದಂತೆ । ತಮ್ಮ ಭಕ್ತಿ ಯಲಿ ತಾವೇನಮಾಡಿದರು ॥ಪಲ್ಲ॥ ಗುಡಿಯುಲಿಂಗಕ್ಕೆ ಕಣ್ಬಟ್ಟುಗಲೀಪಗಳ । ಬಿಡದೆ ಪೂಮಾಲೆಗಳ ಸಿಂಗರಿಸುವಂತೆ ।ಪೊಡವಿಜನ ತಮ್ಮ ಭಕ್ತಿಯು ಲೇನು ಮಾಡಿದರು ಕೊಡಹಿಬೇಡೆನ್ನದಿರು ಲಿಂಗಾದ ಮೇಲೆ ॥೧॥ ಬೇಕೆಂದು ಮಾಡುವರು ಬೆಡೆಂದರೆ ಬಿಡುತಿಹರೆ ।ಏಕ ಮನಸಿನ ಭಕ್ತಿ ಶಿವಗೆ ಸಲ್ಲುವ ದು ॥ ಸಾಕು ತಗಲಿನ ಭಕ್ತಿ ಮಾಡಿದರು ಸಲ್ಲದು । ಲೋಕದೋಳು ಲೀಲೆ ಮಾತ್ರಾಗಿ ಬಂದ ಮೇಲೆ ॥೨॥ ಸಲ್ಪ ಭಕ್ತಿಯು ಸೇವೆಯಲ್ಲಿರಲು ಸಲ್ಪವು । ಸಲ್ಲದ ಪದಾರ್ಥಗಳು ಸಲ್ಲುತಿಹವೆ ॥ ಎಲ್ಲ ಗುರುಮಹಂತಲಿಂಗೇಶಗೆ ಸಮರ್ಪಿಸುತ ತಲ್ಲೀನವಾಗಿ ಮಹಲಿಂಗದೊಳಗೆ ॥೩॥

೬೯

ಅವರವರ ಭಕ್ತಿಗೆ ಅವರವರ ಭಾವಕ್ಕೆ । ಅವರವರ ತೆರನಾಗಿ ಇರುತಿ ಹನು ಶಿವಯೋಗಿ ॥ಪಲ್ಲ॥ ಇರದೊಂದು ಕನ್ನಡಿಯು ನೂರಾರು ಜನ ಪಿಡೆಯೆ । ಸರಳಾಗಿ ಅವರವರ ರೂಪು ಕಾಣುವಂತೆ । ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರ । ನರರೇನು ಭಾವಿಸುವರವರಂತೆ ತೋರುವನು ॥೧॥ ಮತ ಭೇದದವರು ದುರ್ಮತಿಯಿಂದ ಯತಿವರಗೆ । ಸ್ತುತಿನಿಂದೆ ಮಾಡಿದರೆ ಅವರಿಗೆ ತಿರುಗುವವು । ಯತಿವರನು ತಾ ತನ್ನ ಪಥದಲ್ಲಿಯಿರುವನು । ಕ್ಷಿತಿಯು ಜನರ ಪಾಪ ಪುಣ್ಯಫಲ ಪರೀಕ್ಷೆ ॥೨॥ ಕುಲಛಲವ ಹಿಡಿದಿರುವ ಕಲಕ ಮನದವರಲ್ಲಿ । ತಿಳುವಳಿಕೆ ಶಿವಚಂದ್ರಮ ಕಾಣುವ ಪರಿಯಂತು । ಕುಲಛಲವನತಿಗಳೆದ ತಿಳಿಯುಮನದವರಲ್ಲಿ । ಸಲೆ ಮಹಂತಲಿಂಗ ಚಿತ್ ಸೂರ್ಯ ಕಾಣುವನು ॥೩॥

೬೦

ಮಗನ ತೂಗಿರೋ ಭಕ್ತರು ಮಗನ ತೂಗಿರೋ । ಅಗಜೆ ತನಗೆ ಮೊಲೆ ಹಾಲಿಲ್ಲದೆ ಜಗಕೆ ಕಳುಹಿದಳು ಪುತ್ರನ ||ಪಲ್ಲ|| ಭಕ್ತಿರಸವ ದಣಿಯ ಲುಂಡು । ಶಕ್ತಿವಂತನಾಗಿ ಬಹಳ || ಮುಕ್ತಿ ಮಾರ್ಗ ಪಿಡಿದು ಬಾರೆಂ । ದ್ಯುಕ್ತಿಯಿಂದ ಕಳುಹಿದಳು ||೧|| ತಾಯಿ ತಂದೆಗಳನು ಆಗಲು । ಪಾಯ ತಪ್ಪಿ ಧರೆಗೆ ಬಂದೆ । ಸಾಯುಗೊಲದೆ ಭವದಿ ಕೆಡಹಿ । ಘಾಯ ಮಾಸಿ ಜನ್ಮ ರೋಗದ ||೨|| ಪರುಮ ಶಿಶು ಮಹಂತೇಶ ಗಿರಿಜೆ। ಹಿರಿಯ ತಂದೆ ತಾಯಿ ಗಳೆನ್ನ। ಮರೆತರವರು ಮಗನ ಚಿಂತೆ। ಗುರಿಯಮಾಡಿದವರಯ್ಯ ನಿಮಗೆ||೩||

೬೧

ಗುರುವೆ ನೀ ಮಾತನಾಡೊ । ಸುರತರು ಕಲ್ಪತರುವೆ ನೀ ಮಾತ ನಾಡೊ । ಸುರರ ದೇವರ್ಕಳ ಒಡ್ಡೋಲಗದೊಳು ಮೆರೆವನೀ ಮಾತನಾಡೊ ||ಪಲ್ಲ|| ಲಿಂಗವೆ ಮಾತನಾಡೊ । ಶ್ರೀಗುರು ಮಹಂತಲಿಂಗವೆ ಮಾತ ನಾಡೊ || ಸಂಗನ ಶರಣರ ಅಂಗೈಯೊಳಿರುವಂಥ ಲಿಂಗವೆ ಮಾತನಾಡೊ ||೧|| ಹರನೆ ನೀ ಮಾತನಾಡೊ ಗೋಪತಿ ಮೇಲೆ ಮೆರೆವನೀ ಮಾತನಾಡೊ ಧರೆಯ ತಾಳಿರುವಂಥ ಉರಗನ ಧರಿಸಿದ ದೊರೆಯೆ ನೀ ಮಾತನಾಡೋ ||೨|| ಅಕ್ಷಯ ಮಾತನಾಡೊ । ಅನ್ನವನುಂಬ ಭಿಕ್ಷುಕ ಮಾತನಾಡೊ || ಪಕ್ಷಿ ವಾಹನ ಸಂಪ್ರೀತನಾಗಿರುವಂಥ ಸಾಕ್ಷಾತ್ ಮಾತನಾಡೊ ||೩|| ದಕ್ಷರಿಪು ಮಾತನಾಡೊ । ಅಥರ್ವಣವನ್ನು ಶಿಕ್ಷಿಪ ಮಾತನಾಡೊ || ಕುಕ್ಷಿಯೊಳಗೆ ತ್ರೈಲೋಕವನೊಳಕೊಂಡು । ರಕ್ಷಿಪ ಮಾತನಾಡೊ ||೪|| ಮಸಣ ವಾಸನೆ ಮಾತನಾಡೊ । ಮಾಯೆಗೆ ಸಿಲ್ಕದಸಮನೆ ಮಾತನಾಡೊ । ವಸುಧೆಯೊ ಳಗೆಯೊಬ್ಬ ವನಿತೆಯ ಮೋಹದ ಶಿಶುವೇ ನೀ ಮಾತನಾಡೊ ||೫|| ಭಕ್ತಿ ಬಂಧುವೆ ಮಾತನಾಡೊ । ಮುಕ್ತಿಯ ಮಾರ್ಗದ ಗೊತ್ತು ತೋರುವನೀ ಮಾತನಾಡೊ । ಭಕ್ತಿಯುಳ್ಳವರಲ್ಲಿ ನಿತ್ಯವಾಗಿರುವ ವಿರಕ್ತ ನೀ ಮಾತ ನಾಡೊ ||೬|| ದೇವನೀ ಮಾತನಾಡೊ । ದೇವರ ಸಂಜೀವನೆ ಮಾತ ನಾಡೊ || ಪಾವನ ಗಂಗೆಯ ಜಡೆಯೊಳು ಧರಿಸಿದ ಸ್ವಾಮಿ ನೀ ಮಾತ ನಾಡೊ ||೭|| ಸಂಗನ ಬಸವಣ್ಣನ ಸತಿಯ ನುಂಗಿದವನೆ ನೀ ಮಾತ —ಡೊ । ಭೃಂಗೀಶ ಮೊದಲಾದ ಪ್ರಮಥ ಗಣಂಗಳ ಸಂಗಾತಿ ಮಾತ

ನಾಡೊ ||೮|| ಜಂಗಮ ರೂಪಿನಲಿ ಜಗವ ನೋ | ಡಲು ಬಂದಾತ ಮಾತನಾಡೊ || ಜಂಗುಳಿ ದೇವರ ಒಡೆಯ ಶ್ರೀಗುರು ಮಹಂತಲಿಂಗವೆ ನೀ ಮಾತನಾಡೊ ||೯||

೯೨

ಯಾರು ಬಂದರೆ ಏನು | ಯಾರು ಹೋದರೆ ಏನು | ಪೂರ ನಿಜ ಧ್ಯಾಸನವ ಸೇರಿ ನಿಂದರಿಗೆ||ಪಲ್ಲ|| ಕ್ರಿಯೆ ಮಾರ್ಗ ಕನ್ನಡಿಯ ಸ್ವಯಸೂಕ್ಷ್ಮ ದಿಂ ಪಿಡಿದು | ದಯದಿ ಗುರುತತ್ವಮಸಿಕಂಡು ಲೌಕಿಕರ || ಕಾಯ ವರ್ಣಾ ಶ್ರಮದ ಭೇದ ವರ್ತನೆ ಬಿಟ್ಟು || ಪಾಯದಿಂ ಮಹಾಲಿಂಗ ಭೋಗಿಯೆನಿಸಿ ದಗೆ ||೧|| ರಾಗ ವಿರಾಗ ವರ್ಜಿತನಾದ ಮಹಿಮನಿಗೆ | ತ್ಯಾಗ ಭೋಗಗ ಳುಳ್ಳ ಅರಸು ಆಳೊಂದೆ || ಯೋಗ ಶಿವಮುದ್ರೆಯಲಿ | ಎರಡಳಿದು ಭವ ಮಾಲೆ | ನೀಗೆಸವ ಶ್ರೀ ಶಿವೋಹಂಭಾವಿಗೆ ||೨|| ಅಂದಳವು ಸಿದಿಕೆಯು ಗಂಧ ಕಸ್ತೂರಿ ಕೇಸರಿ | ವಂದೆ ಮಾಡಿಹ ಭಕ್ತಿಭೋಗಕ್ಷೇತ್ರದೊಳು|| ಇಂದು ಜಲದೊಳಗಿರ್ದು ಇಲ್ಲದಂತಿರುವ ಮಹಾ | ನಂದಮಯ ಗುರುಮಹಾಂತ ಲಿಂಗನಿಗೆ ಗೌರಿ ||೩||

೯೩

ಧನ್ಯನಾದೆನು ಶಾಂತವೀರಸ್ವಾಮಿ | ನಿನ್ನ ಪಾದಾರವಿಂದವ ಕಂಡು ದ್ಧಾರ ||ಪಲ್ಲ|| ಎಚ್ಚರ ಮರೆದಿದ್ದೆನಯ್ಯ | ನಿನ್ನ ಕಚ್ಚಿ ತ್ರೈಮಲಗಳ ಪಕ್ಷಿ ಮದಯ್ಯ || ಎಚ್ಚರ ಕೊಟ್ಟೆನ್ನಜೀಯ | ನೀನೆ ಸಚ್ಚಿದಾನಂದ ನೆಂದೊರೆದಿದೆ ದಮ್ಮಯ್ಯ ||೧|| ಹೃದಯವಾರಿಜದಿಂದ ಬಂದು | ಯನಗಿಹುದು ಮರವೆ ಕದವನು ತೆರೆದು ನೋಡೆಂದು || ಪದುಳದಿಂವಳಗಲ್ಲೆನಿಂದು | ನಿನ್ನ ಸವ ಮಲ ರೂಪವ ತೋರಿದೆ ಇಂದು ||೨|| ಚಿದ್ಗವಿಯೊಳಗಿರುವಂಥ | ನಿತ್ಯಮ ದ್ಗುರು ಚರರೂಪದಿ ಚರಿಪಂತ || ಸದ್ಗುಣ ಗಣನುಳ್ಳ ಶಾಂತ | ಕರಗದ್ಗಿ ಯೊಳಗೆ ಮಹಂತಲಿಂಗಾಗಿ ನಿಂತ ||೩||

೯೪

ಗುರುವೆ ನಿಮ್ಮ ಕರುಣಾದೃಷ್ಟಿಯ ತೆರೆದು ನೋಡೆನ್ನ | ದುರಿತ ಹರಿದು ಹೋಗುವಂತೆ ಮಹಂತ ಬಾಲಬ್ರಹ್ಮಿಯೇ ||ಪಲ್ಲ|| ಇರುವೆ ಮೊದಲು ಆನೆ ಕಡೆಯು ಸಕಲ ಜನ್ಮವ ತಿರುಗಿ | ನರಶರೀರ ತಾಳಿ

ಪಡೆಯದೆ ॥ ಮರಳಿ ಹುಳಗಿಡಂಗಳಾಗಿ ಹುಟ್ಟುತಿರುವರ ಕಂಡು । ಶರಣು ಹೊಕ್ಕೆ ಹೆದರಿ ನಿಮ್ಮ ಗುರುವರೇಣ್ಯನೆ ॥೧॥ ಎಷ್ಟು ಉಂಟು ಭೂಮಿಯ ಮೇಲೆ ಕಣ್ಣಿಗೆ ಕಾಣುವದು ತನಗೆ । ಅಷ್ಟರೊಳಗೆ ತಾನೆಹುಟ್ಟಿ ಬರುವು ದೆಂದಿಗೆ ॥ ಶ್ರೇಷ್ಠವಾದ ಮನುಜ ಜನ್ಮ ದೊರಕುದೆಂದಿಗೆ । ತಾನು ಸೃಷ್ಟಿಗೀಶ ಶಿವನ ಪಾದ ಕಾಣುವುದೆಂದಿಗೆ ॥೨॥ ಪಾಹಿ ಮಾಯಾ ಕೋಲಾಹಲ ಮದನ ಮರ್ದನ ಶೂರ । ಪಾಹಿ ನಿಮ್ಮ ಪಾದಕಮಲ ಭಜಕ ಭಕ್ತರ ॥ ಪಾಹಿ ಭಕ್ತಿ ಪ್ರಮೆ ವೈರಾಗ್ಯ ರತ್ನ ಸಾಗರ ಸಾಧ್ಯ ! ಪಾಹಿಮಹಂತ ಲಿಂಗರಾಜ ಶಿವಯೋಗೀಶ್ವರಾ ॥೩॥

೯೫

ಧರ್ಮವೆ ಇದು ಶಂಕರಾ । ಪ್ರಾಣಿಗಳ ಕರ್ಮ ನಿರ್ಮಾಣ ಮಾಡಿ ಕೊಲ್ಲುವದು ॥ಪಲ್ಲ॥ ಪರಿಪರಿಯದೋಷಹಚ್ಚಿ । ನರಿ ನಾಯಿ ಕುರಿಕೋಳಿ ಜನ್ಮ ಮೊದಲಾದಿರುವಿಯಂಭತ್ತು ನಾಲ್ಕು ಲಕ್ಷ । ಶರೀರದೊಳು ಪುಟ್ಟ ವಂತೆ ಮಾಡಿದೆಯ ॥೧॥ ಸುರಿವ ರಕ್ತದ ಯೋನಿಯ ಒಳಗೊಮ್ಮೆ । ಬರುವಾಗ್ಗೆ ಕೋಟಿ ಸಿಡಿಲು ಹೊಡೆದಂತೆ । ಹಿರಿಬಾಧೆಯಾಗುತಿಹುದು । ಮುಂದಿನ್ನು ಸರ್ವಜನ್ಮದ ಬಾಧೆಗೆ ನೆಲೆಯಿಲ್ಲ ॥೨॥ ನರಜನ್ಮ ದೊರಕು ದೆಂದು ಸರ್ವರಿಗೆ ಅರಿವು ತಾ ಹುಟ್ಟುದೆಂದು । ಜ್ಞಾನುಳ್ಳ ಪರಮ ಗುರು ದೊರಕುದೆಂದು । ಇವರಿನ್ನು ಸ್ಥಿರಮುಕ್ತ ರಾಗುವದೆಂದೊ ನಾ ಕಾಣೆ ॥೩॥ ಮರೆತು ನಿರ್ಮಿಸಿದೆ ಕರ್ಮವನು ಶಂಕರಾ । ಶರಣರಾರಿದ್ದಿಲ್ಲವೆ ಎಚ್ಚರ। ಕರ ದು ಹೇಳಲ್ಕೆ ನಿಮಗೆ ಮೂಲೋಕ ಪಿರಿಯರಿಗೆ ಎಚ್ಚರುಂಟೆ ಶಿವನೆ ॥೪॥ ಕರ್ಮವೆಂಬುವ ನೀರಿನ ಸೆಲೆಯಲ್ಲಿ ಅರಿತುಕಬ್ಬಡೆ ಕಂಡೇನಿ । ಮುಂದಿನ್ನು ಗುರು ಮಹಂತೇಶ್ವರ । ಜೀವಿಗಳು ಪರಿಪರಿಯ ಬಳಲುತಿಹರು ನಿಮಗೆ ॥೫॥

೯೬

ಜಯಜಯ ಗುರುವೆ ಪಾಲಿಸಿ । ದಯಮಾಡೋ ಪದವ. ॥ಪಲ್ಲ॥ ಮೋಕ್ಷದಾಯಕ ಗಣ । ಸಾಕ್ಷಿಸಹಿತ ತ್ರೈದೀಕ್ಷೆನೇನೊಲಿದಿತ್ತೆ ॥೧॥ ನಿತ್ಯ ನಿತ್ಯನಿರಂಜನ ವಸ್ತುವಿದೆಂ । ದುತ್ತಮ ಹಸ್ತದೊಳಿತ್ತೆ ॥೨॥ ಲಿಂಗದ ನಡೆ ನಿಜಲಿಂಗ ನುಡಿ । ಚಿಲ್ಲಿಂಗದ ಜ್ಞಾನವನಿತ್ತೆ ॥೩॥ ಸ್ವಯ ಚರಪರ ಜಂಗಮ ಚರಣದ ಚಿನ್ । ಮಯ ತೀರ್ಥವ ಸಲಿಸುತ್ತೆ ॥೪॥ ಶುದ್ಧ ಸಿದ್ಧ ಪ್ರಸಿದ್ಧ

ಪ್ರಸಾದವ । ನಿರ್ಭರದಿಂದ ಣಲಿತ್ತೆ ||೫|| ನಿನ್ನ ಪದಾಬ್ಜದ ರೇಣು ಭಸಿತವ । ನನ್ನ ಲಲಾಟದೊಳಿಟ್ಟೆ ||೬|| ಆರು ಮೊಗದ ಮೊಗವಾಗಿಹ ಮಣಿಗಳ ಸೇರಿಸಿ ಕೊರಳೊಳಗಿಟ್ಟೆ ||೭|| ಶಿವಪೆಸರಾದ ಮಹಮಂತ್ರವನೆ । ನ್ನ ವಿರಳ ಕಿವಿಯೊಳು ಪೇಳ್ದೆ ||೮|| ಅಷ್ಟಾವರಣ ತನುವಿಗಳವಡಿಸಿ । ಶಿಷ್ಟಾಚಾರವ ಪೇಳ್ದೆ ||೯|| ಚನ್ನವೀರೇಶ ಮಹೇಶ ಶಿಖಾಮಣಿ ; ಎನ್ನನು ದಯದಿಂ ಪೊರೆಯೋ ||೧೦||

೯೭

ತಾನೆ ಬೆಳಗುತಿದೆ ಸ್ವಯಂ ಜ್ಯೋತಿ ತಾನೆ ಬೆಳಗುತಿದೆ । ಮಾನಸ ವಾಚಕ ಕಾಯಕದೊಳು ತನ್ನ ||ಪಲ್ಲ|| ತನ್ನ ವಾಮಕರ ಪೀಠ ಪಾತ್ರೆಯೊಳು । ನಿರ್ಭಿನ್ನ ಭಕ್ತಿಯ ರಸತೈಲ ತೀವಿ । ಸನ್ನುತ ನಡೆನುಡಿಭಕ್ತಿ ವಿಡಿದು । ಸುಪ್ರಸನ್ನ ಪ್ರಕಾಶ ಸತ್‌ಕ್ರಿಯಾ ಜ್ಯೋತಿ ||೧|| ಪರತತ್ವಹೃದಯ ಪ್ರಣತೆಯೊಳು । ಷಣ್ಮಂತ್ರದರುವೆಂಬಸುರಸ ತೈಲವ ಹೀರುತ । ವರದೃಢ ಚಿತ್ತ ಭಿತ್ತಿಯ ಕೊನೆಯೊಳು । ಲಿಂಗಕಿರಣದೊಬ್ಬಳಿಯ ಸುಜ್ಞಾನ ಜ್ಯೋತಿ ||೨|| ಚಾರು ಸದ್ಭಾವ ಪಣತೆಯೊಳು । ತತ್ವವಿಚಾರ ಸುಸಾರ ಘೃತವನೀಂಟುತ । ಮೀರಿದಾಚರಣೆ ಬತ್ತಿಯ ಕೊನೆಯೊಳು । ಚನ್ನವೀರ ಮದ್ಗುರು ಮಹಾಜ್ಞಾನ ಜ್ಯೋತಿ ||೩||

೯೮

ಆನಂದವಾನಂದ ಭಜನಾ ಶಿವಯೋಗಿ ಧ್ಯಾನಾ । ಆನಂದವಾನಂದ ಹರನ ನಾಮಾಮೃತಪಾನ ||ಪಲ್ಲ|| ಬೈಗು ಬೆಳಗು ಬಿಡದೆ ಭಜಿಪೆ । ಭವ ಹರನೆ ನಿನ್ನ ನುತಿಪೆ || ಯುಗದವತಾರಿ ನಮಿಪೆ । ಶಿವಯೋಗಿ ಬಾರೊ ||೧|| ಭಕ್ತಗಣವು ನೊಂದಿಹುದೆಂದು । ಮುಕ್ತಿಪಥವ ತೋರದಿಂದು || ಭಕ್ತಿಮುಕ್ತಿ ಅರುಹಲಿಂದು । ಜಗಯೋಗಿ ಬಾರೊ ||೨|| ಗಚ್ಚಿನ ಮಠದಿ ನೆಲಿಸಿ । ಸಗ್ಗದ ಸಂಭ್ರಮ ತರಿಸಿ । ಸಗ್ಗವ ಮೀರಿದೆ ದೇವಾ । ಮನೋದಿವ್ಯಭಾವಾ ||೩|| ಹೇ ದಯಾಘನ ಲೀಲಾ । ಪರಮಪಾವನಲೋಲಾ || ಎಮ್ಮ ಹೃದಯ ಕಮಲ ಮಾಲಾ ಜಗದ ಕೃಪಾಲಾ ||೪||

೯೯

ಪರಿಪಾಲಿಸೊ ಗುರುವರ್ಯ ಘನಶೀಲನೆ ಮುರುಘಾರ್ಯ ||ಪಲ್ಲ|| ಪೊಡವಿಗೊಡೆಯ ನಿನ್ನ ಅಡಿಯ ಪಿಡಿಯ ಬಂದೆನೆನ್ನ ನುಡಿಯ ಬಿಡದೆ ಲಾಲಿ

ಸಯ್ಯ ಜಡ ಧೃಢಮತಿಯ । ಕೊಡುವುದಯ್ಯ ತಡವೇಕಯ್ಯ ಸಡಗರದಿಂದ ಸೌರಿಮಯ್ಯ । ಇಡುವುದೀಗೆನ್ನೊಳುದಯ ಪಿಡಿದುಕೋ ನೀನೆನ್ನ ||೧|| ಯೋಗಿ ನಿನ್ನ ಸೇವೆಗಾಗಿ ತಾಗ ಬಾಗಿ ತಲೆತೂಗಿ ಸಾಗಿಬೇಗ ಬಂದೆ ನಿನ್ನ ಜಾಗಕೀಗಳೆ । ಹೋಗದೆ ಸಂಸ್ಕೃತಿದಯವಾಗದೆಮನ್ನೊಳು ನಿಗಮಾಗಂಗ ಳೆಲ್ಲ ನಿತ್ಯ ಕೂಗಿ ಕೂಗಿ ಪೇಳ್ವವು ||೩|| ಕಾಶಿಗಿಂತ ಮೇಲುತರ ಭಾಸುರಥ ಣಿಯ ಪುರವಾಸ ದೋಷ ನಾಶಭವ ಪಾಶವಿಹರ । ಆಶಿಸುತ್ತಿ ಬರುವರು ಸೋಸಿ ನೋಡಿ ನೀನಂಕರ । ದಾಶಯ ಪರಮೇಶನಾಗಿ ಸ್ತುತಿಪರಿ ||೩||

೧೦೦

ಗುರುದೇವಾ ಪೊರೆಯೈ ಜ್ಞಾನು ಭಾವಾ ವರವೈಭವಾ ಚರಪುಂಗವಾ ||ಪಲ್ಲ|| ಸಾರಗುಣಾಂಕಲಿ ತಾ ಕೃಪಾಲಾ ಸುರಿಸೊಜಾಲಾ ಪಾಲಲೋಲ । ಚಾರು ನಿರ್ಮಲ ಘನಶೀಲಾ ||೧|| ಯೋಗಕಲಾಮಹಿ ತಾ ಸ್ವರೂಪಾ ಭೋಗ ಸಂತಾಪಾ ದೂರ ಕೋಪ ರಾಗಾ ವಿರಹಿತ ಜಿತಪಾಪಾ ||೨|| ಭಾಸುರ ಮಾದಥಣೀ ನಿವಾಸಾ । ಶ್ರೀ ಮುರಘೇಶಾ ಸ್ತೋತ್ರ ತೋಷಾ । ಭೂಸೇವ್ಯಾ ಸಿದ್ಧಲಿಂಗೇಶಾ ||೩||

೧೦೧

ದೇವ ಜನಜೀವ ಸದ್ಭಾವ ಮುನಿಪುಂಗವಾ । ಅಥಣಿಯ ಪುರವಾಸಿ ಮಹಿಪಾವನಾ ||ಪಲ್ಲ|| ಜ್ಞಾನಹತಪಾಪ ಜಿತಕೋಪ ಯತಿ ಮಾನಸಾ ಮಾನಾಪಮಾನಯೋ ಸಮಮಾನಸಾ ||೧|| ನಿತ್ಯ ಶಿವತತ್ವ ಶಿವಧ್ಯಾನ ಮತಿಸ್ಥಾಪಿತಾ। ತವ ಭೃತ್ಯಾ ವೀರಾ ಬಾಲಾನುತಾ||೨|| ಸ್ವಾಮಿ ಶಿವಯೋಗಿ ಕುಲಪಾಲ ಭವನಾಶಕಾ ಕಾಮಾರಿ ಜಿತಸೋಮ ನುತಪಾಲಕಾ ||೩||

೧೦೨

ಶ್ರೀಗುರುಪ್ರೇಮವು ಶಿವಯೋಗಿ ನಾಮವು ಶ್ರೀಪಾದಪದ್ಮವು ಓಂ ಓಂ ಓಂ ||ಪಲ್ಲ|| ಶ್ರೀ ದೇವನೇ ಶ್ರೀ ಸುಭಾವನೆ । ನೀಗಿ ಭವದ ಭಾವ ಸಾಗಿ ಭೋಗಿಸುವನು ಸದಾ ಓಂ ಓಂ ಓಂ ||೧|| ಸುಶೀಲನೇ ಬಲು ವಿಶಾಲನೇ । ಭಾಸುರಥಣಿಪುರ ವಾಸರಜತಗಿರಿ । ಪೋಷಿಸದ್ಗುರಿ ದೂರಿ ಓಂ ಓಂ ಓಂ ||೨|| ಚಿನುಮಯನೆ ಘನ ತನುಮಯನೆ । ಮನ ಮದನಹರ ಜ್ಞಾನ ಧಾರಣಧರ । ಜ್ಞಾನಮಂಗಲಕರ ಓಂ ಓಂ ಓಂ ||೩||

ಉನ್ನತನೆ ಧರ್ಮ ಸನ್ನುತನೆ । ಚಿನ್ನಚೆನ್ನಿಗವೀರ ಚನ್ನನಮುನಧೀರ ಶೂನ್ಯ ಸಿಂಹಾಸನ ಶೂರ ಓಂ ಓಂ ಓಂ ॥೪॥ ನಿಶ್ಚಿಂತನೆ ಸುಖಸುಚಿಂತನೆ । ವಾಚ ವಚನ ವರ್ಣ ಯೋಚನೆಯು ಕಾರಣ । ಲೋಚನೇಶನೆ ಕರುಣಾ ಓಂ ಓಂ ಓಂ ॥೫॥

೧೦೩

ಶ್ರೀ ಮುರುಘೇಂದ್ರನ ಸುಂದರ ಪಾದವ । ಪ್ರೇಮ ಲೀಲೆಗಳ ಪಾಡುತೆ ನಮಿಸುವ ॥ಪಲ್ಲ॥ ವೀಣೆಯ ನುಡಿಸುತೆ ಗಾನವ ಪಾಡುತೆ ತಾಳದಿ ಪಿಡಿಯುತೆ ಮೇಳದಿ ಕುಣಿಯುವ । ಅಥಣಿಯ ಶ್ರೀ ಶಿವಯೋಗಿಯ ಭಜಿಸುವ ॥೧॥ ಬಗೆಬಗೆ ಲೀಲೆಯ ಜಗದೊಳು ತೋರುತ । ಭಾವಿಕ ಜನ ರನು ಪಾವನಗೈಯುವ । ಪರತರ ಯೋಗಿಯ ಹರುಷದಿ ಹಾಡುವ ॥೨॥ ಭಕ್ತರ ಭವ ಬಂಧನವನು ಕಳೆಯುತ। ಲಿಂಗಾನಂದದ ನಿಜವನು ತೋರುವ। ಮಂಗಲ ಮೂರ್ತಿಯ ಮೋದದಿ ನೆನೆಯುವ ॥೩॥

೧೦೪

ಶ್ರೀ ಶಿವಯೋಗಿ । ಅಥಣಿಯ ಶ್ರೀ ಶಿವಯೋಗಿ ॥ ಅಥಣಿಯ ಶ್ರೀ ಶಿವಯೋಗಿ ॥ಪಲ್ಲ॥ ಇಂಗಳಗಾವಿಯೊಳ್ ಬೇಗನೆ ಜನಿಸಿ । ಬಗೆಬಗೆ ಲೀಲೆಯ ತೋರುತಲಿ । ಅಥಣಿಯ ಶ್ರೀ ಗಚ್ಚಿನಮಠವಾಸಿ ॥೧॥ ಮುಕ್ತಿಯ ಪಡೆಯಲು ಗುಹೇಶ್ವರ ಗದ್ದೆಯೊಳ್ । ಸತತದಿ ತಪವನು ಆಚರಿಸಿ ಸುತ್ತಲು ಜನರನು ಮುಗ್ಧಗೊಳಿಸಿದಿ ॥೨॥ ಬಸವಾದಿ ಪ್ರಮಥರಂತೆ ನಡೆ ಯುತ । ಯೋಗಿ ಮಣಿಯೆಂದೆನಿಸಿದಿ । ಪಾವನವಾಗಲು ಪರಶಿವನೊಳ್ ಬೆರೆದಿ ॥ ೩ ॥

೧೦೫

ನೋಡಿ ಧನ್ಯನಾದೆ ನಾನೀಗ । ಶಿವಯೋಗಿಯ ಪಾದವ ನೋಡಿ ಧನ್ಯನಾದೆ ನಾನೀಗ ॥ಪಲ್ಲ॥ ನೋಡಿ ಪಾದವ । ಮಾಡಿ ಸ್ತೋತ್ರವ। ಕೂಡಿ ಧ್ಯಾನದಿಂ ಬೇಡಿ ಮೋಕ್ಷವ ॥೧॥ ತೂರಿ ಮಾಯೆ ಜಾಲವನ್ನು। ಹಾರಿ ನಿತ್ಯ ತತ್ವ ಸುಖಕೆ । ಸೇರಿ ಬ್ರಹ್ಮವನ್ನು ಭವದ ದಾರಿ ಮೀರಿ ರಾಜಿಪುದರಿಂ॥ ೨ ॥ ಭಾಸುರಥಣಿಯ ನಾಮಪತ್ತನ । ವಾಸುರುಚಿರ ಗಚ್ಚಿನಮಠ । ಧೀಶ ಮುಕ್ತಿಕೋಶ ಶ್ರೀ ಮುರುಘೇಶನೆಂದು ಬಾಸಿಪುದರಿಂ ॥ ೩ ॥

## ೧೦೬

ಶಿವಯೋಗಿರಾಜಚಾರ್ಯೆ ಭವದೀಯುಪಾದ ತೋರ್ರೈ । ತವೆ ನಿನ್ನ ನುತಿ ಸದರಾರ್ರೈ ಜವದಿಂದೆ ಕರುಣವ ಬೀರ್ರೈ ॥ಪಲ್ಲ॥ ನೀನೆನ್ನ ಪೊರೆಯೈ ತಂದೆ । ನೀನೆನ್ನ ಕರೆಯೈ ಮುಂದೆ । ಸ್ವಾನೂನ ಸುಖಕೊಡು ತಂದೆ ನೀನೀಗನುಗ್ರಹ ದಿಂದೆ ॥೧॥ ಪತಿತಾಳಿ ಪಾವನ ನಾಮಾ । ಮತಿಯೀಯೊ ನೀನಭಿರಾಮಾ । ಗತಿಯಾಗೊ ಭಕ್ತರಧಾಮಾ । ಹಿತಮಾಡೊ ನಿನಗಿದು ನೇಮ ॥೨॥ ಅಡಿ ದಾವರೆಯೊಳಗಿರುವೆ । ಬಿಡದೋತು ಸಲಹೈ ಗುರುವೆ । ಕೊಡುಬೇಡಿದುದ ಸುರ ತರುವೆ । ತಡಮಾಡದಿರು ಎನ್ನರುವೆ॥ ೩ ॥ ಮಲವೆಲ್ಲ ಹೊನ್ನು ಹೆಣ್ಣು ನಿನಗುಂಟು ಜ್ಞಾನದ ಕಣ್ಣು । ನೆಲಿಸಿಗ ಸೇವೆಯುಗನ್ನು ಒಲಿಯೋ ಸದಾ ಶಿವಗಿನ್ನು ॥ ೪ ॥

## ೧೦೭

ಯೋಗಿಯ ಪಾದವ ತೋರೊ ಶಿವ । ಯೋಗಿಯ ಪಾದವ ತೋರೊ ಶಿವ ॥ಪಲ್ಲ॥ ನಿನ್ನ ಮಹಿಮೆಯು ಯಾರಿಗು ತಿಳಿಯದು । ಶಿವಸರ್ವಾನಂದ ದಲಿರುವ ॥ ೧ ॥ ನಿರ್ಮಲ ಭಾವದಿ ಲಿಂಗಪೂಜೆಯ ಮಾಡಿ । ಪುರಹರನಿಗೆ ತೋಷಿಸುವಾ ॥೨॥ ಶ್ರೀ ಗುರುಶಾಂತನ ಶಿಷ್ಯರೆಂದೆನಿಸುವ । ಮುರುಘೇಂದ್ರ ನಾಮದಿಂದಿರುವ ॥ ೩ ॥ ಅಥಣಿಯ ಪುರದೊಳು ವಾಸ ಶ್ರೀ ಗಚ್ಚಿನಮಠ ದೋಳಾನಂದದಲಿರುವ ॥ ೪ ॥

## ೧೦೮

ಯೋಗಿ ಪಾಲಿಸೈ ಶ್ರೀ ಶಿವಯೋಗಿ ಪಾಲಿಸೈ । ಯತಿವರ್ಯ ಧೃತ ಚರ್ಯ ನುತಿಸುವೆ ಸತತದಿ ॥ಪಲ್ಲ॥ ಶಿವಯೋಗ ನಿದ್ರೆಯೊಳಿರ್ಪನೆ । ಸುವಿ ರಕ್ತ ಅಥಣಿಯವಾಸನೆ । ಕವಿದಿರ್ಪ ಭವವನ್ನು ತವೆಸವಿಸೆನ್ನನು ॥ ೧ ॥ ಅಷ್ಟಮದಂಗಳ ನೋಡಿಸಿ । ದುಷ್ಟ ಸಮ ಭಾವಿಸಿ । ಶ್ರೇಷ್ಠ ಸದ್ಭಕ್ತರಿ ಗಿಷ್ಟಾರ್ಥವಿತ್ತಿಹ ॥ ೨ ॥ ಆರು ಭ್ರಮೆಗಳೆನ್ನ ಕೊಲ್ವವು । ಮೂರು ತಾಪಂ ಗಳು ದಹಿಪವು । ಸಾರಸ ಮೋಕ್ಷದ ಮಾರ್ಗವ ತೋರಿ ॥ ೩ ॥ ಕಾಲಭಯ ವನು ಕೀಳುತೆ । ಬಾಲನಂದದೊಳೆನ್ನ ನೋಡುತೆ । ಶೂಲಿಯ ನೊಲಿಸಿರ್ದ ಶೀಲಗುಣ ಸಚ್ಚರಿತ ॥ ೪ ॥ ಗುರುವರ ಶರಣರ ಕಾಯ್ವನೆ ಧರೆಯೊಳು ಮಹಿಮೆಯ ತೋರ್ದನೆ ಪರಮಾತ್ಮನೊಳಕೊಂಡ ಮುರುಘೇಶ ಶ್ರೀಕರ ॥ ೫ ॥

೧೦೯

ಅಗಲಿದಿಯಾ ಶಿವಯೋಗಿವರೇಣ್ಯಾ । ಅಗಲಿದಿಯಾ ಜಗವನೀಗಿದೆಯಾ ||ಪಲ್ಲ|| ಪರಮವೈರಾಗ್ಯನೆ ಲೌಕಿಕ ಭೋಗದೊಳ್ ಉರುತರ ಯೋಗಿನಿನಾಚಾರದಲಿ ||೧|| ಅತಿಶಯ ಕೈಲಾಸದಧಿಪತಿ ಶಿವರೂಪನೆ ಹತಮಾಡಿ ಕಾಮನ ಖ್ಯಾತಿಹೊಂದಿದೆಯಾ ||೨|| ಭಕ್ತ ಸಮೂಹಕೆ ಮುಕ್ತಿ ಮಾರ್ಗವ । ಯುಕ್ತಿಯಿಂ ಬೋಧಿಸಿ ಮುಕ್ತರೊಳ್ ಕೂಡಿದೆಯಾ ||೩|| ಶಿವಯೋಗ ಭರಿತನೆ ಭವರೋಗ ವೈದ್ಯನೆ । ಭುವಿಯೊಳ್ ಮಹಿಮೆಯು ತೋರಿಯೈದಿದೆಯಾ ||೪|| ಧರೆಯೊಳು ಮೆರೆಯುವ ಅಥಣಿಯು ಪುರವಂ ತೊರೆದು ಶಿವಲೋಕವನೈದಿದೆಯಾ ||೫||

೧೧೦

ಶಿವ ಶಿವ ಜನ್ಮವಿದು ವ್ಯರ್ಥವು । ಸೇವೆ ಸತ್ಕರ್ಮಂಗಳನೆ ಮಾಡದಾ ||ಪಲ್ಲ|| ಸ್ವಾಮಿಯ ಪಾದವ ನೇಮದಿ ಪೂಜಿಸೆ । ಕಾಮಿತ ಫಲಗಳ ಪಡೆಯದಲೆ || ಕಾಮಿನಿಯರೊಳು ಕಾಮಿಸಿ ಬೀಳುವ ||೧|| ಲೋಕ ಕಲ್ಯಾಣಕೆ ತನುಮನ ಧನಗಳ । ಸಾಕಾಗುವಂತೆ ಮಾಡಿಸದಲೆ । ಕಾಕುಮನದಿಂದ ನೂಕಿ ನುಗ್ಗಾಗುವ ||೨|| ಬಾಸುರಧಣಿಮಠಧೀಶನಂ ಮುಕ್ತಿ । ಸಂತೋಷದಿಂದಲೆ ಆಶಿಸದೆ । ಹೇಸಿ ಸಂಸಾರದಿ ಘಾಸಿಯಿಂ ನಾಶಿಪ ||೩||

೧೧೧

ಭಜಿಸು ಭಜಿಸು ಶಿವ ನಾಮವನು । ಅಜಹರಿಗರಿಯದ ಪಾದವನು । ಮೂಜಗ ತೇಜದ ಶೇಖರನು । ಮಾಜದೀವ ನಿಜ ಮೋಕ್ಷವನು ||ಪಲ್ಲ|| ಸತಿಸುತ ಹಿತರರು ಮುಡಿದಿರಲಿ । ಅತಿಸಂಕಟವದು ಒದಗಿರಲಿ । ಕ್ಷಿತಿಜನಾಥನದು ಕಾಡುತ್ತಿರಲಿ । ಸತತ ಬಿಡದೆ ನಿರುಪಮ ಶಿವನ ||೧|| ರೋಗಬಾಧೆಯದು ಒದಗಿರಲಿ । ಭೋಗರಹಿತನಾಗಿರುತಿರಲಿ । ನಾಗಪರಿದು ಘೂರ್ಣಿಸುತಿರಲಿ । ರಾಗದಿ ಸಂತತ ಚಿನ್ಮಯನ ||೨|| ನಾಶಪ್ರಪಂಚದ ಮೋಹವನಳಿದು । ನಾಶವಳಿವ ದೇಹವನುಳಿದು । ರೋಷ ಮದ ಮತ್ಸರವಳಿದು ಈಶ ಮುರುಘೇಶನ ಪಾದವಿಡಿದು ||೨||

೧೧೨

ಶಿವಯೋಗಿ ಜಗ ಪಾವನ ಮಾಡಿದ ಯೋಗಿ ।ಅಥಣಿ ವಿರಾಗಿ ಶ್ರೀ ಶಿವಯೋಗಿ ॥ಪಲ್ಲ॥ ನಿತ್ಯನಿರಂಜನ ಚಿತ್ಸುಖಿಯಾಗಿ । ಮೃತ್ಯು ಭಯವನೆ ತಾ ನೀಗಿ ॥೧॥ ಬೆಳಗುವ ಜ್ಯೋತಿಯು । ಒಳಹೊರಗಾಗಿ ತಿಳಿ ಬೆಳಗುವ ರುಚಿ ತಾನಾಗಿ ॥೨॥ ಅಮಲ ಆರೋಗಿನಿ ಸ್ವಯಂವಿಧನಾಗಿ । ನುತಿಸುವ ಗುರು ಪಾದನು ಶಿರಬಾಗಿ ॥೩॥

೧೧೩

ನೀನೆಲ್ಲಿ ಮಾಯವಾದ್ಯೋ ಮುರುಘದೇವಾ ತೊರವೆನಗೆ ಚಿನ್ಮಯಾ॥ ಅರಿಯದವರು ನಾವು ನಿಮ್ಮಯ ನಿಲವ। ತಿಳಿಯದವರೋ ನಾವು। ತಿಳಿಯದೆ ಕೆಟ್ಟೆವು ಮಾಯಾ ಸಂಸಾರದೊಳು । ತೋರೋ ಮಹಿಮನೆ ದೇವಾ ಹೇಸ್ವಾಮಿ ॥ಪಲ್ಲ॥ ತಂದೆ ತಾಯಿ ನೀನೆ ಲೋಕದೊಳು ಬಂಧು ಬಳಗ ನೀನೆ । ಬಂದ ಕಂಟಕಗಳನು ಪಾರುಮಾಡುವಂಥ ಸಂಗಮನಾಥನೇ ನೀ ಮುರುಘಯೋಗಿ ॥೧॥ ಪರಶಿವ ನವತಾರಿಯೇ ಭೂಲೋಕದೊಳು ಭಕ್ತೋದ್ಧಾರಕನೇ । ಪರಮಾನಂದದಿ ಭಕ್ತರ ಕಾಯುವಂಥ ಮುಕ್ಕಣ್ಣ ಮುರುಘೇಂದ್ರನೆ ಹೇಸ್ವಾಮಿ ॥೨॥ ಶ್ರೀ ಕ್ಷೇತ್ರ ಅಥಣಿಯೊಳು ಗಚ್ಚಿನ ಮಠವು ಕೈಲಾಸವಾಗಿಹುದೊ । ಯೋಗ ಮಂಟಪದೊಳು ಪೂಜೆಗೈಯುವ ಮುರುಘ ದೇವನೆ ಬಾರೊ ಹೇಸ್ವಾಮಿ ॥೩॥

೧೧೪

ಶಂಭೋ ಶಂಕರಾ ನೀಲಕಂಠಾ ಬೇಗಬಾರೋ ಶಿವ ಶಂಭೋ ಬೇಗ ಬಾರೋ ॥ಪಲ್ಲ॥ ಭಜಿಸುವ ಭಕ್ತರ್ಗೆ ನಿಜಪದವಂ ತೋರೊ । ಸುಜನರ ಹೃದಯನೇ ಬೇಗ ಬಾರೋ ॥೧॥ ವರಚೋಳರಾಯಗೆ ಉರುತರ ಸಂಪದ ವಿತ್ತು । ಹರಶರಣರ ಹೃದಯನೇ ಬೇಗ ಬಾರೋ ॥೨॥ ಧರೆಯೊಳು ಅಥಣಿಯು ಪುರದೊಳು ಮೆರೆಯುವ । ಗುರುವರ ಮಹಾ ಶಿವಯೋಗಿ ಬೇಗ ಬಾರೋ ॥೩॥

೧೧೫

ಶರಣರ ಮಹಿಮೆ ತಿಳಿಯುವದೇ ಶಿವ ಪರಿಪರಿ ಪಾಪದ ನರ ಗುರಿಗಳಿಗೆ ।ಪಲ್ಲ॥ ದುರುಳರ ಸಂಗದಿ ಸರಸವನಾಡುತ। ಪರದ್ರವ್ಯವನಪಹರಿಸುವ

ವರಿಗೆ ||೧|| ಹೆಣ್ಣಿನ ರೂಪವ ಕಣ್ಣಿಲೆಕಂಡು | ಸಣ್ಣಾಗುವ ಈ ನರಗುರಿಗಳಿಗೆ ||೨|| ಧರೆಯೊಳು ಮೆರೆಯುವ ಪರತರ ಆಭರಣಿಯ | ವರಶಿವಯೋಗಿಯ ನೆನೆಯದವರಿಗೆ ||೩||

೧೧೬

ಜಗದೇಕನಲಾ ಕರ್ನಾಟಕ ಕೀರ್ತಿಕಲಾಪಾ | ಭಗವಾನ್ ಭಲಾ ಕಲ್ಯಾಣದ ಕನ್ನಡ ದೀಪಾ ||ಪಲ್ಲ|| ಧರ್ಮಾವತಾರಿ ನೀನೆ ಭುವನಾದಿ ಮಂಗಲಾ | ನಿರ್ಮೋಹ ಮಾಯೆ ನೀನೆ ಶಿವಭಕ್ತಿ ಶೀತಲಾ | ಶಿವಶಕ್ತಿ ಕಲಾ ಯುಕ್ತನಲಾ ಜಗದನುಕೂಲನಲಾ ||೧|| ಸರ್ವಾತ್ಮ ಸತ್ಯ ನೀನೆ ಪರಿಪೂರ್ಣ ಭಾವನಾ | ಹೇಪುಣ್ಯ ಮೂರ್ತಿವನೂತ ಮುನಿಷ್ಮಾಯ ಜೀವನಾ | ಕನ್ನಡದಿ ವೇದ ನುಡಿದ ದಿವ್ಯವಾಗ್ಮಯಾ ||೨|| ಮಡಿವಾಳ ಮಾಚಿದೇವ ಶ್ರೀ ಸಿದ್ಧರಾಮನಾ | ಉಡುತಡಿಯ ಅಕ್ಕಮಹಾದೇವಿಯ ಪ್ರೇಮ ಜೀವನ | ಹಡಪದಪ್ಪ ಹರಳಯ್ಯಗಳು ಸುಪ್ರಸಾದ ಸೇವನಾ ||೩|| ನವಯುಗ ಧರ್ಮ ಪ್ರವರ್ತಕಾ ಪ್ರಭಾಮಯಾ | ಭುವಿಯೋಳ್ ಸಮತಾವಿವಾದಿ ಕ್ರಾಂತಿ ಅರಸಿಯಾ | ಶಿವತತ್ವದಿ ಜಯವ ಪಡೆದ ಬಸವ ಚಿನ್ಮಾಯಾ ||೪||

೧೧೭

ಪೊರೆಯೈ ಬಸವ ಸುಕುಮಾರಾ ಸುಧೀರಾ ಭಜಕ ಭವದೂರಾ | ಪುರಹರಾ ಭಕ್ತಿ ಸುಖ ಪೂರಾ ಸುಧೀರಾ ಶೈವಮತ ಸಾರಾ ||ಪಲ್ಲ|| ಅನಿಮಿಷನೆಂಬ ಭೂವರನ ಘನತರ ತಾಪವನು ಕಂಡು | ಕನಿಕರಪಟ್ಟು ಲಿಂಗವನು ಕೊಟ್ಟು ಕರುಣಿಸಿದ ಮಹಿಮನ್ ||೧|| ಪರಶಿವನಾಜ್ಞೆಯನು ಸರಿಸಿ ಬಾಗೇವಾಡಿಯೋಳ್ ಜನಿಸಿ | ಭೂಸುರನ ಕರ್ಮವನು ತ್ಯಜಿಸಿ | ಎರಡನೆ ಶಂಭುವೆಂದೆನಿಸಿ ||೨|| ಸೂಕ್ತಿಯ ಸದನವನು ಬೀರಿ | ಭಕ್ತಿಯ ಮಾರ್ಗವನು ತೋರಿ | ಮುಕ್ತಿಯ ಮಾರ್ಗವನು ಸಾರಿ | ಭಕ್ತಿಯ ಪದದಿ ನೀ ಮೆರೆವಾ ||೩||

೧೧೮

ಪತೀತ ಪಾವನ ಬಸವಣ್ಣ | ಪಾವನ ಚರಿತನು ಚನ್ನಣ್ಣಾ | ಯತಿಕುಲ ಪುಂಗವ ಮಂಗಲಮಯ ಗುರು ಪ್ರಭುದೇವರು ಜಗದಣ್ಣ ||ಪಲ್ಲ|| ಪ್ರಮಥರ ಪುಂಗವ ಮಂಚಣ್ಣಾ | ಸಮತಾವಾದಿಯು ಅಪ್ಪಣ್ಣ |

ಕುಮತಿಗಳೆದೆಯನು ಕುಟ್ಟೀ ಹಾಡುವ ನಮಿತ ಪರಾಕ್ರಮ ಬೊಮ್ಮಣ್ಣಾ ||೧|| ದೇವರ ದಾಸಿಮಯ್ಯನವರಣ್ಣಾ | ಸೇವಕ ಜನಸುರ ತರುವಣ್ಣಾ | ಪಾವನವೆನಿಸುವ ಲಿಂಗ ತತ್ವವ ಸ್ತ್ರೀ ಪುರುಷರಿಗರುಹಿಪರಣ್ಣಾ ||೨|| ಅಂದಿಂದೆನ್ನಲು ಬೇಡಣ್ಣಾ ನೀ ಇಂದಿದು ಮುಂದಿನ ದಿನವಣ್ಣಾ | ಚಂದ್ರಶೇಖರನ ಸುಂದರ ಭಾಗ್ಯದ ಕಂದನು ಬರುವದು ದಿನವಣ್ಣಾ ||೩||

೧೧೯

ಬಸವಾ ಮುಕ್ತಿದಾತಾ ದ್ವಿತೀಯ ಶಂಭುವೆನೀ ||ಪಲ್ಲ|| ನಿತ್ಯ ನಿನ್ನಯ ನಾಮ ನೆನೆದು ಸತ್ಯತನದಲಿ ಸೇವೆಗೈದು | ಭೃತ್ಯನುತನ ಪಾದವಿಡಿದು ನಿತ್ಯ ನಿನ್ನನು ಭಜಿಪೆವು | ಸತ್ಯ ಸಂಧನುತ ಸಂಗಮೇಶಸುತ ||೧|| ಮಂದಮತಿಯ ಕಂದ ನಾನು ಎಂದು ನಿನ್ನನು ಕಾಂಬೆನು | ಚಂದ ಚಂದದ ಕುಸುಮಗಳನು ತಂದು ನಿಮಗರ್ಪಿಸುವೆನು | ತಂದೆ ವಂದಿಸುವೆ ಸಂಗಮೇಶಸುತ ||೨|| ಯಜ್ಞಯಾಗಾದಿಗಳಲಿ ಅಜ್ಞಮೂಕ ಪ್ರಾಣಿಗಳಲಿ | ಸುಜ್ಞ ಜನಕೆ ಸೇರದೆಂದು ಯಜ್ಞಮಾಡಕೂಡದೆಂದು ! ಆಜ್ಞಾಮಾಡಿದಾತಾ ಸಂಗಮೇಶಸುತ ||೩|| ಸದಹೃದಯ ವಿಧವೆ ಜನರ ಮದುವೆ ಮುದದಿ ಮಾಡಿದ | ಹಾದಿ ಹುಡುಕಿ ಅಬಲೆಯರ ಮಾನ ಕಾಯ್ದು ಮಾನವರ | ಮಾನ ಉಳಿಸಿದಾತಾ ಸಂಗಮೇಶಸುತ ||೪|| ವೀರಶೈವ ಧರ್ಮ ಗುರುವೆ ಕಲ್ಯಾಣಪುರದಿಯಿರುವೆ | ವೀರಭದ್ರನವರವಯಿರುವೆ ಭಜನೆಸಂಗಮೇಶ ಗುರುವೆ | ಗುರುವೆವಂದಿಸುವೆ ಸಂಗಮೇಶಸುತ ||೫||

೧೨೦

ಬಸವಾ ಬಾಬಾ ವಸುಧಿಗೆ ನಿನ್ನಯ | ಜಸವನು ತೋರಲು ಬೇಗನೆ ಬಾ || ರಸಿಕರ ಮನಸಿಗೆ ಕುಶಲವ ಬೀರುತ | ಪೊಸರಾಜ್ಯವ ನೀನಾಳಲು ಬಾ ||೧|| ಮಂತ್ರಿಯ ಕೆಲಸವ ತಂತ್ರದಿ ನಡಿಸುತ ಜಂತ್ರವ ನೀ ತಿರುಗಿಸಲು ಬಾ || ತಂತುವ ತೆಗೆಯುತ ಸ್ವಂತದಿ ನೇದಿಹ ಮಂತ್ರದ ಬಟ್ಟೆಯ ಧರಿಸಲು ಬಾ ||೨|| ಕನ್ನಡ ನುಡಿಯಿದು ಸಣ್ಣಾಗುತ್ತಿದೆ | ಚನ್ನಿಗ ಬಸವನೆ ಪೊರೆಯಲು ಬಾ || ಉನ್ನತ ಜನರಿಗೆ ಕನ್ನಡ ಮಂತ್ರದಿ ನಿನ್ನಯ ವಚನದಿ ಪೇಳಲು ಬಾ ||೩||

೧೨೧

ಬಸವಭೂಮಿ ನಿನ್ನ ಸೇವೆ ಹರುಷದಿಂದ ಮಾಡುವಾ । ಹಸುಳರೆಲ್ಲ ನಿನ್ನ ಚರಣದಲ್ಲಿ ಕೊರಳ ನೀಡುವಾ ।ಪಲ್ಲ। ಕಳೆದು ಹೋದ ಘನತೆಯನ್ನು ಮರಳಿ ಜಗಕೆ ತೋರುವಾ । ಹೊಳೆವ ಬಾಲ ಸೂರ್ಯನಂತೆ ಧರೆಯನೆಲ್ಲ ಬೆಳಗುವಾ ||೧|| ವೀರಶೈವ ಧರ್ಮ ಕ್ರಾಂತಿಗಾಗಿ ದೇಹ ನೀಡುವಾ । ವೀರ ತರುಣ ವೃದ್ಧರೆಲ್ಲ । ರಣಕೆ ಬೇಗಸಾಗುವ ||೨|| ಗುರುವಿರಕ್ತರೆಲ್ಲ ಭೇದ ಬುದ್ಧಿಯನ್ನು ತಾಳದೆ । ನಿರುತ ನಿನ್ನ ಸೇವೆಗೈದು । ಶಾಂತಿಗೊಳಿಸ ಬಾರದೆ ||೩|| ವೀರಶೈವ ಬಂಟರೆಲ್ಲ ಶೂರತನವ ತೋರುತ । ವೀರ ಮರಣ ವನ್ನು ನಾವು ಬೇಗ ಅಪ್ಪಿಕೊಳ್ಳುತಾ ||೪|| ಮಾನಹೀನರಾಗಿಹೆವು ನಿಮ್ಮನ್ನು ಅರಿಯದೆ । ಜ್ಞಾನ ತೋರಲೀಗ ಚನ್ನಬಸವ ಜನಿಸಬಾರದೆ ||೫||

೧೨೨

ದಯಮಾಡೊ ದುರದುಂಡಿ ಸಾಂಬನೀನೆ । ದಯಮಾಡೊ ದುರ ದುಂಡಿ । ದಯಮಾಡೊ ದುರದುಂಡಿ ಹರಹರ ದಯಮಾಡೊ ದುರ ದುಂಡಿ ||ಪಲ್ಲ|| ಕೊಡುವ ಕಾಲಕೆ ಕರುಣದಿಂದಲಿ ನೋಡುವ । ಬೇಡಿ ಕೊಂಬೆನು ಕೃಪೆಮಾಡೊ ಮಹದೇವಾ ||೧|| ಮಡುವಿನೊಳಗೆ ಬಿದ್ದು ಮುಳು ಮುಳುಗೇಳುತ । ಕೊಡು ಆಸೆಯನ್ನು ಗುಣದೊಡೆಯ ಶಂಕರನೆ ||೨|| ಸಕ ಲನೇ ಐಶ್ವರ್ಯ ಕೊಡುವ ಸಮರ್ಥನೆ । ಗೋಕಾವಿವೀರರದಾತನೆ ತವೆ||೩||

೧೨೩

ಹಾನಗಲ್ಲ ಶ್ರೀ ಕುಮಾರದೇವಾ ಚಿರ ಚಿದ ಭವಪರಮ ವಿತರ ಮಾರ್ಗನಯ ಪ್ರಮಥರ ||ಪಲ್ಲ|| ಮದನ ಮದವಹಠದಿಂ ಹಾರಿಪವಿಧಿ ಪೂರ । ಸದಮಲ ಸುಖವಿಕಾಸ ಗತಿಹಿತದ ಗುರುವೇ ||೧|| ಭವದ ಬೇರ ನಗಿದು ಕೀಳುವ ಶಿವಯೋಗ ನೆರೆಸುಖವ । ನಿರ್ಮಿಸಿದನು ಪರಮ ಶರಣ ಧಾಮ ||೨|| ಆರು ಮೂರನೊರಿದು ಮೀರಿದ ಮನಸೇರಿ ಅನುದಿನದ ಸುಖ ಯೋಗಿ । ವರಘನಾವಿರಾಗಿ ||೩||

೧೨೪

ಬಾರೈ ಗಾನಮಯ ಮೂರ್ತಿ । ತೋರೈ ಮಂಗಲದ ಕೀರ್ತಿ । ನೀನೆ ಗತಿ ದೀನೋನ್ನತಿ ಗೈದ ವಿಮಲಸುಕೃತಿ ||ಪಲ್ಲ|| ಪಂಚಾಕ್ಷರ ಮಹಾಮಂ?

ನಾಮಾ । ಪಂಚಮುಖ ಮನೋ ಜಪಕ್ರಮ । ಪಂಚವದನ ಧರ್ಮ ಪ್ರೇಮ ॥೧॥ ಭೂತಲದೊಳು ಸಂಗೀತ । ನೀತಿ ಪ್ರಸಾದ ಗೊಳಿಸುತ ಶಾಂತಾತ್ಮನಾಗಿ ಚರಿಸುವ । ಅಂಗಹೀನರ ಸಲುಹಲು ಬಾ ॥೨॥ ಗುರು ಕುಮಾರ ಸ್ವಾಮಿಗೆ ತನುವ ಕರದಲಿಂಗಕೆಸುಮನವ ನರಸಮಾಜಕೆ ಪ್ರಾಣಧನವ । ಅರ್ಪಿಸಿದ ಗಾಯನಸುಧಾರ್ಣವ ॥೩॥

೧೨೫

ಭೋಧವ ಕೊಡುದೇವಾ ಮನಕೆ । ಶಿವಯೋಗದ ಸುಸ್ವಾದವ ತಿಳಿವಾ ॥ಪಲ್ಲ॥ ಹೊನ್ನಿನ ಹೆಣ್ಣಿನ ಭ್ರಾಂತಿಯ ದೂಡಿ । ಜಂಗಮಾರ್ಯನ ಅಂಗಸೇವಿಸುವಾ॥೧॥ ಜ್ಞಾನಬಲಿತು ಭವ ಬಾಧೆಯು ನೀಗಿ । ಬೇಗಮೋಕ್ಷದ ಮಾರ್ಗವ ಪಿಡಿವಾ ॥೨॥ ವರಮಠದೀಶನೆ ತೋಂಟದಾರ್ಯ । ಬೇಗ ಅಂಗವು ಲಿಂಗದಿ ಬೆರೆವಾ ॥೩॥

೧೨೬

ಎಲ್ಲಾ ರೂಪವು ತಾನಂತೆ ಶಿವ । ಎಲ್ಲೆಲ್ಲಿಯು ತುಂಬಿಹನಂತೆ । ಅಲ್ಲಲ್ಲರಸುತ ಗುಡಿಗಳ ತಿರುಗುವ । ಕಳ್ಳಜನರಿಗೆ ಕಲ್ಲಾತೆ ಶಿವ ॥ಪಲ್ಲ॥ ಕಣ್ಣೆಂಬುದು ತನಗಿಲ್ಲಂತೆ ಶಿವ । ಕಣ್ಣಿಗೆ ಕಾಣಿಸದಿಹನಂತೆ । ಕಣ್ಣು ತೆರೆದು ತನ್ನರಸುವ ಜನರಿಗೆ ಬಣ್ಣ ಬಣ್ಣವಾಗಿಹನಂತೆ ॥೧॥ ದೃಶ್ಯಾದೃಶ್ಯವು ತಾನಂತೆ ಶಿವ । ದೃಶ್ಯಾದ್ವೈತಗಳೆರಡಂತೆ । ದೃಶ್ಯಾದ್ವೈತಗಳೆರಡರ ನಡುವೆ ಶಾಶ್ವತ ರೂಪವು ತಾನಂತೆಶಿವ ॥೨॥ ಶಂಕರನಾದವು ತಾನಂತೆಶಿವ । ಕಿಂಕರರೊಳು ಸಾರಿಹನಂತೆ । ಬಿಂಕನು ಮುರಿಸುವ ಕಿಂಕರಿಗೆ ಗುರು ಮುರುಘೇಶ ರೂಪವು ತಾನಂತೆ ಶಿವ ॥೩॥

೧೨೭

ನಿಜವೆಂದು ತಿಳದು ಪೂಜಿಸು ಗುರುಚರಣಾ । ತ್ಯಜಿಸೋ ನೀಮಾಯ ಪ್ರಪಂಚದ ಸ್ಮರಣ ॥ಪಲ್ಲ॥ ವನಿತೆಯರ ಮೋಹವೆಂಬದು ದೊಡ್ಡ ಶರಧಿ । ಅನುಕೂಲದಿಂದಲಿ ದಾಟೋ ನೀ ಭರದಿ ॥೧॥ ನಿತ್ಯವಲ್ಲದ ಕಾಯ ನೆಚ್ಚಿರ ಬೇಡಾ । ವ್ಯರ್ಥ ಮೋಹಕೆ ಸಿಲುಕಿ ಕೆಡದಿರು ಮೂಢಾ ॥೨॥ ಎಂದಿಗು ಮರಣ ತಪ್ಪದು ಕೇಳ್ ಮರುಳೇ । ಚಂದ್ರಶೇಖರನ ಪೂಜಿಸು ಹಗಲಿರುಳೇ ॥೩॥

೧೨೮

ಸದ್ಗುರುವಿನದಯು ದಯದಿಂದೆಲ್ಲಾ ನು ಪೈ ಮರೆತೆನೆ ॥ ಇದು ಏನ ಕಾರಣ ಪೈಮರೆತು ಮತ್ತಾಳಾದೆನೆ । ಕೈ ತಲೆಮೇಲೆ ಇಡಲು ವೈರಾಗ್ಯವ ಪಡೆದೆನೆ । ಫೈಫೈಫೈ ಅಂತಾ ಕಣಿಸಿ ತನ್ನಂತೆ ತಾವಮಾಡಿದನೆ ಹರ ॥ಪಲ್ಲ॥ ನಾನು ನೀನೆಂಬುದು ಎರಡು ತಾನೆ ತಾನಾದನೆ । ಮಾನ ಅಪಮಾನವೆರಡು ತಾನೆತಾನಾದನೆ ॥ ಜ್ಞಾನ ಮಾರ್ಗವ ತೋರಿ ಧ್ಯಾನ ಹೇಳಿದನೆ ಬಾನ ತೋರಿಸಿ ವಿನೋದ ಮಾಡಿದನೆ ॥೧॥ ನಾದ ಶಬ್ದದೊಳ್ ಮನಲುಬ್ಧಮಾಡಿದನೆ । ವಾದಿ ದುರ್ವಾದಿ ಕೂಡ ಕೂಟ ಗೆಲಿಸಿದನೆ । ಭೇದಾಭೇದವಕ್ಷರಿಯುದ ಬುದ್ಧಿ ತೋರಿದನೆ ॥ ಕದ ಹುಲಿಯಂಥ ಮನಸ್ಸು ಸಾಧಿದನ ॥೨॥ ತ್ರೈಕೂಟ ಮಧ್ಯದಲಿ ವಸ್ತು ಪ್ರಕಟ ಮಾಡಿದನೆ । ನಾಸಿಕಾಗ್ರದ ಕೊನೆಯ ಮೇಲೆ ಭಾನುಪ್ರಕಾಶ ತೋರಿದನೆ । ಈಶನುದತ್ತ ವಮುಕ್ತಿಪದಿಗಂಬರ ಘೋಷದೊಳಗೆ ಮನವಿರಿಸಿದನೆ ॥೩॥

೧೨೯

ಆದಿವೃಷಭನೆ ಅಸುರ ವಿನಾಶಕ ಬಾಗುವೆ ತವ ಪದಕೆ । ಪ್ರಭುವರ । ಬಾಗುವೆ ತವಪದಕೆ ॥ಪ॥ ಪೂರ್ವದಿ ಮುನಿಪಗೆ ನಂದೀರೂಪದಿ ಜಡೆಯೊಳು ಜನಿಸಿದಿ ನೀ ಪ್ರಭುವರ । ಪಾರ್ವತೀಶನ ಘೋರದೋಳು ಸೋಲಿಸಿ ವರವನು ನೀಡಿದಿ ನೀ ॥೧॥ ಹರನ ನೇಮದಿ ಬಸವನಾಮದಿ ವಸುಧಿಯೊಳಗವತರಿಸಿ । ಪರ ವೀರಶೈವಾಚಾರ ಧರ್ಮವ ಧರೆಯೊಳು ನೆಲಿಸಿದಿ ನೀ ॥೨॥ ಮಾದಲಾಂಬಿಕೆ ಮಾತೆಯು ನಿನ್ನನು ಅನುದಿನ ಅರ್ಚಿಸಲು। ಮೋದದಿಂದಲಿ ಬಾಲಲೀಲೆಯು ಸಲಿಸಿದಿ ಭಕುತರಿಗೆ ॥೩॥ ನೃಪನಾ ಸಭೆಯೊಳು ಲಿಪಿಯುದು ಬೀಳಲು ತ್ವರಿತದಿ ಓದಿದಿನಿ । ಅಪಾರ ಮಹಿಮನೆ ಅದಿ ಪಸ್ಮಾವೆ ಲೀಲೆಯು ತೋರಿಸಿದಿ ॥೪॥ ಕಾಲು ಜಾರಿದ ಬಾಲೆಯು ನಿನ್ನಯ ನಾಮವನುಚ್ಚರಿಸೆ । ಲೀಲೆಯಿಂದಲಿ ಹಸ್ತವ ನೀಡುತ ರಕ್ಷಿಸಿದೀ ಅವಳ ॥೫॥ ಜಂಗಮನೋರ್ವನು ನಿನ್ನಯ ಪತ್ನಿಯ ವಸ್ತ್ರವ ಬೇಡಿದೊಡೆ । ಅಂಗನೆಯು ಅಕ್ಷಯ ವಸ್ತ್ರವ ದಾನವ ಮಾಡಿದಿ ನೀ ॥೬॥ ಮೂರು ಲೋಕವ ಧರ್ಮರೂಪದಿ ಬಿಡದಲೆ ತುಂಬಿರುವಿ । ಮಾರಮರ್ದನ ಶಂಭುಹೃದಯದಿ ನಿರುತವು ವಾಸಿಸುವಿ ॥೭॥ ಅಸಮ ಚರಿತನೆ ಅನುಪಮ ಮಹಿಮನೆ ಅದ್ಭುತ ಕೃತಿಲೀಲಾ । ವಸುಧಾ ತಲದೊಳು ಮರೆವಾಡ ಗ್ರಾಮದಿ ನಿರುತವು ನೆಲೆಸಿರುವಿ ॥೮॥

೧೩೦

ಶಿವ ನಿನ್ನ ಪಾದವ ನಂಬಿದೆ । ಎನ್ನ ಕಾಯುವ ಭಾರವು ನಿನ್ನದು ತಂದೆ ||ಪಲ್ಲ|| ನಾನೆಂಬೊ ಮಮಕಾರದಿಂದೆ । ಶಿವನಾನೆಂಬೊ ಮಮ ಕಾರದಿಂದೆ । ನಾನಾ ಜನ್ಮಗಳೆಲ್ಲ ತಿರುಗಿ ನಾಬಂದೆ । ಎನಗಿನ್ನು ದಾರಿಯು ತೋರದು ಮುಂದೆ । ದೀನ ರಕ್ಷಕ ಎನ್ನ ಕರಿಯೈಯ್ಯ ಮುಂದೆ ||೧|| ತನು ಮನಧನ ನಿನ್ನದಯ್ಯ । ಶಿವ ತನುಮನ ನಿನ್ನದಯ್ಯ । ನಿನ್ನ ದಾಸನ ಸೇವೆಯು ಎನ್ನದು ನೋಡಯ್ಯ । ಅನುದಿನ ತವನಾಮ ನೆನೆಯುವೆನಯ್ಯ । ಘನಮೋಕ್ಷ ಪದವಿಯ ನಾನೊಲ್ಲೆನಯ್ಯ ||೨|| ಭಕುತರ ಬಂಟ ನೀನಂತೆ । ಶಿವ ಭಕುತರ ಬಂಟ ನೀನಂತೆ । ಮುನ್ನ ಬಾಣನ ಬಾಗಿಲ ಕಾಯ್ದುವನಂತೆ । ಭಾಳಲೋಚನ ನಿನ್ನ ಭಜಿಸಿದ ಉಪಮನ್ಯು ಬಾಲಭಾವಕೆ ಮೆಚ್ಚಿ ಕ್ಷೀರ ವಾರಿಧಿಯಿತ್ತೆ ||೩|| ಶಿರದೊಳು ಗಂಗೆಯ ಧರಿಸಿ । ಶಿವ ಶಿರದೊಳು ಗಂಗೆಯ ಧರಿಸಿ । ಗಿರಿಜಾತೆ ವಾಮಾಂಕ ಭಾಗದೊಳಿರಿಸಿ । ಪೊರೆಯುವ ಪರಮೇಶ ಮರಣವಿನಾಶಾ । ವರಯಾಳನಳನಿಧಿ ವಾಸರಾಮೇಶಾ ||೪||

೧೩೧

ಮಂಗಲಕಾರಿ ದುರಿತವಿಹಾರಿ । ನಿಗಮಾಗಮನುತ ಪರತರ ಸುಚ ರಿತ ||ಪಲ್ಲ|| ವೀರಶೈವಮತ ಜೀರ್ಣೋದ್ಧಾರಿ ಧರ್ಮಶಾಸ್ತ್ರನುದ್ಧಾರಿ । ಚಿರ ಮಾರಾರಿ ಭೂತನಿಸ್ತಾರಿ । ಮತಹಿತ ಕೃತಪೀತ ಪರತರ ಸುಚರಿತ ||೧|| ಶ್ರೀ ಶಿವಯೋಗ ಸುಮಂದಿರ ಸ್ಥಾಪಿತ । ವಿದ್ಯಾಧ್ಯಯನ ಜನತಾದಿ ಪ್ರೀತಾ । ಬೋಧವಿಖ್ಯಾತಾ ಭೋವಿಖ್ಯಾತಾ ಮತಹಿತ ಕೃತ ತ ಪರತರ ಸುಚರಿತ ||೨|| ಕ್ರೂರ ಮನಸಿಜ ಸಾಯಕ ನಾಶಕ ಶಿವಸುಖದಾಯಕ ಪಾವನ ರೂಪಕ । ವರಸುಕುಮಾರಾ ಭವಭಯದೂರ ಮತಹಿತಕೃತಪಿತ ಪರತರ ಸುಚರಿತ ||೩||

೧೩೨

ಜಯಶಾಂಭವ ಯೋಗಸಮಾಧಿಕಲಾಗುರು ತೋಂಟದಾರ್ಯ । ಜಯಗುರು ತೋಂಟದಾರ್ಯಾ ||ಪಲ್ಲ|| ದೇವನಿರಂಜನ ಭಾವಜ ಭಂಜನ ಧಾವಿತ ಕಾಮಾಂಜನ ಹೃದಯ ! ಭಾವಸುಭಾಜನ ಭಾವವಿನೋದ ||೧|| ಅಸ್ತ್ರೃತಮೋಭರ ವಿಸ್ತ್ರೃತ ಮೋಭರ ಶಸ್ತ್ರಸಚರಿತ ನಿರಸ್ಥಭಯ ! ಪ್ರಸ್ಥುತ

ಜನವಿಧ್ವಸ್ತವುಹಾಭಯ ||೨|| ಬಾಧನುವುಪ್ರಭು ಗೂಢಸವಾಧಿಗ | ಬೇಡಿದಪದಯುಡಿಯಾಡುತಲಿ | ಯೋಗಿ ಮಣಿ ಶಿವಯೋಗಸುಮಂದಿರ|| ||

೧೩೩

ಜಯಮಂಗಲ ಮರುಘೇಶಾ | ಜಯುಮಂಗಲ ಪರಮೇಶಾ | ಜಯ ಜಯ ಸದ್ಗುಣಕೋಶಾ ||ಪಲ್ಲ|| ದುಷ್ಟನಿವಾರಣದೇವಾ | ಶಿಷ್ಟಸಂಪೋಷಣ ಲೋಕಾ | ಇಷ್ಟವರದ ಚಿದ್ರೂಪಾ ||೧|| ನಿರುಪಮ ನಿರ್ಗುಣದೇವಾ | ನಿರಮಯ ನಿರಹಂಕಾರಾ ! ಪರತರ ಸಾನವರೂಪಾ ||೨|| ಕ್ಲೇಶವಿರಹಿತ ಸುಗಾತ್ರಾ | ಕೇಶವನಮಿತಸುಚರಣಾ | ಭಾಸುರಘಣಿಪುರವಾಸಾ ||೩||

೧೩೪

ಪರಮ ಶ್ರೀ ಶಿವಯೋಗೀಶ್ವರ ಯೋಗಾನಂದ ಲೀಲಾ ಶಿವಯೋಗಾನಂದ ಲೀಲಾ ||ಪಲ್ಲ|| ಮಂಗಲಂಕೇ ಚರ ಲಿಂಗಪುಂಗವ ಮಾರ | ಭಂಗ ಶಿವಲಿಂಗಾ ಸಂಗಲಿಂಗಾ ಜ್ಞಾನಪೂರ್ಣ ||೧|| ನಿರಘನಿರಾಪಾ ಹರ ಮುನಿತೋಷಾ | ಮುರುಘಾಮಹಂತ ಕೃತ ಚಿತ್ತ ಪ್ರಾಣಧಾಸಾ ||೨|| ಶ್ರೀ ಕರಘಣಿಪುರ ಲೋಕ ಕೃಪಾಕರ | ಶ್ರೀಕಂಠಾ ವಿಬುಧನುತಾ ನಿತ್ಯ ಶಿವ ಧ್ಯಾನಾ ||೩||

೧೩೫

ಕರ್ಪುರಾರತಿ ಬೆಳಗಿರೆ | ಕಾರುಣ್ಯಾವ್ಯಗಕರದೇವಗೆ ||ಪಲ್ಲ|| ನೀಲ ಕಂಧರನಿಗಮಗೋಚರ ಬಾಲಚಂದ್ರಾಭರಣಗೆ | ಬಾಲಗೊಲಿದನು ಹಾಲಸ ವಿದನು | ಲೋಲ ಶ್ರೀಗುರುರಾಯನಿಗೆ ||೧|| ವಾರಿಜೋದ್ಭವ ಶಿರವಹರಿದಿಹ ಮಾರಹರಮಹಾದೇವಗೆ | ಘೋರ ದುರಿತವ ದೂರಮಾಡುವ ಶೂರ ಷಣ್ಮುಖನಯ್ಯಗೆ ||೨|| ಶರಣು ಜನರಿಗೆ ವರವನಿತ್ತಿಹ ಪರಮ ಪಾರ್ವತಿ ಯರಸಗೆ | ಧರೆಯೊಳಧಿಕವಾದ ಅಥಣಿಯ ಪುರದ ಶ್ರೀ ಶಿವಯೋಗಿಗೆ ||೩||

೧೩೬

ಕೊಡು ಮಂಗಲವನು ಬಸವರಾಜಾ ಬಿಡದೆ ಮಾಡುವೆ ನಿಮ್ಮಯ ಪೂಜಾ ||ಪಲ್ಲ|| ವಿಶ್ವದೊಳುದಯಿಸಿ ವೀರಶೈವ ಮತವ ವಿಸ್ತಾರ ಮಾಡಿದ ವಿಚಾರಶೀಲ ||೧|| ಜಂಗಮ ಗುರುಲಿಂಗ ಒಂದೇ ಎಂದರಿಯುತ | ಹಿಂಗದೆ

ಜಯಿಸಿದ ತುಂಗ ಮಹಿಮನೆ ||೨|| ಕೂಡಲಸಂಗಮನಾಥನಲ್ಲಿಗೆ ಪೋಗಿ | ಕೂಡಿ ಬೇರೆನಿಸದಾ ಕುಶಲ ಬಸವನೆ ||೩||

೧೩೭

ಜಯಮಂಗಲಮಯ್ಯ ಶಿವಲಿಂಗಾ ||ಪಲ್ಲ|| ಗುರುಕರ ಯೋಗಾ ಗುರು ರೂಪಾಂಚಿತ | ಪರಶಿವಭಕ್ತಸುದೇಹಕೆ ಇಷ್ಟಾಲಿಂಗ ||೧|| ದಿನಕರಹಿಮಕರ ನೂನ್ಯ ಸಂಗತ ಜಾತ | ಮನೋಂಭುಜವಾಸ ಸಕಲ ನಿಷ್ಕಲಚಿಲ್ಲಿಂಗಾ||೨|| ಭಾವಗಮ್ಯಾರೂಪಾ ದೇವಗೆ ಹರಪ್ರಭೋ ಪಾವನಶಿವಯೋಗ ಮಂದಿರ ಭಾವಲಿಂಗಾ ||೩||

೧೩೮

ಜಯ ಮಂಗಲಂ ನಿತ್ಯ ಶುಭ ಮಂಗಲಂ | ಜಯ ಜಯತು ಶಿಶು ಮಹಂತ ಲಿಂಗೇಶಗೆ ||ಪಲ್ಲ|| ಧರೆಯ ಭಕ್ತರು ಮಹೇಶ್ವರರುಗಳ ಪುತ್ರನಿಗೆ | ಶರಣು ಬಸವಾದಿ ಪ್ರಮಥರ ಕಂದಗೆ || ಪರಶಿವನು ಪಾರ್ವತಿಯು ತೊಡೆಯ ಮೇಲಾಡುತಲಿ | ಹರುಷಾಬ್ಧಿ ಹೆಚ್ಚಿಸುವ ಗುರುಪುತ್ರಗೆ ||೧|| ಆಕಾಶವನು ಮೋಡ ಮುಸುಕಿದರೆ ಕೆಡದಂತೆ | ಏಕಾಗ್ರ ಚಿತ್ತದಲಿ ಮನವ ನಿಲಿಸಿ || ಬೇಕುಬೇಡೆಂಬೆರಡು ಭವಬೀಜಗಳ ಹುರಿದು | ಲೋಕದೊಳಗಿದ್ದು ಇಲ್ಲದ ಮಹಿಮಗೆ ||೨|| ಹೇಗೆ ಮಾಳ್ಪರು ಹಾಗೆ ಸಕಲ ಉಪಚಾರಗಳ | ಮಂಗಲದ ಶಿಶುವಾಗಿ ಕೈಕೊಳುತಲಿ || ಭಂಗಾರ ಕಬ್ಬಿಣವು ಹಿರಿಕಿರಿದು ಸಮಗಂಡ | ಲಿಂಗಮಹಂತೇಶಮಹಾ ಜಗತ್ಪಾತ್ರಗೆ ||೩||

೧೩೯

ಮಂಗಲಮಯ ಮಹಂತ ಲಿಂಗದೇಶಿಕನೇ ಜಯ ಜಯ ಹರ ಮಂಗಲಂ ||ಪಲ್ಲ|| ಜೀವ ಪರಮರೈಕ್ಯ ಭಾವವ ತೋರಿದ | ಕೋವಿದ ಮದ್ಗುರು ದೇವ ಸುಂದರನೇ ||೧|| ಲಿಂಗವ ಪೂಜಿಸಿ ಲಿಂಗನೆಯಾಗುವ | ಇಂಗಿತವರುಪಿದ ಕಂಗಳಾಲಯನೆ ||೨|| ನಾಮ ರೂಪುಕ್ರಿಯೆ ಸೀಮೆಯ ಮೀರಿದ | ಸ್ವಾಮಿ ಮಹಂತೇಶ ಮತ್ ಪ್ರೇಮಿ ದಯಾಳೊ ||೩||

೧೪೦

ಮಂಗಳಾರುತಿಯೆತ್ತಿರೇ ಸರ್ವಾಂಗ ಲಿಂಗಮಯಶಿವಯೋಗಿಗೇ| ಗಂಗೆ ಸರಸ್ವತಿ ಯಮುನೆ ನದಿ ಮಂತ್ರಮಯವಾಗಿ ರಂಜಿಸುವ ಪರಮಾತ್ಮಗೆ

ಹರಗೆ ||ಪಲ್ಲ|| ಶಿವಯೋಗ ನಿದ್ರೆಯೊಳಗೆ ತಾನಿರ್ದು ಭವಜಾಡ್ಯ ಜಯಿಸಿರ್ದಗೆ | ಭುವಿಜನರ ಸಂಸಾರ ಗೋಷ್ಠಿಗಳ ನತಿಗಳೆದ ಸವಿಯಾನಂದ ಪರಗೆ ಹರಗೆ ||೧|| ವೇದಶಾಸ್ತ್ರಕೆ ನಿಲುಕದಾ ಮಹಮಂತ್ರ ಬೋಧೆ ನೆಲೆಗೊಂಡಾತಗೆ | ಮೇದಿನಿಗೆ ಚಿದ್ವಿಲಾಸವತಾರ ಮಾಡಿದನಾದಿಪರಶಿವ ಮೂರ್ತಿಗೇ ಹರಗೆ ||೨|| ಆನೆನುಂಗಿದ ಬೆಳವಲಾ ಫಲದಂತೆ ತಾನು ತಾನಾಗಿರುವಗೆ | ಮೌನಿ ನೀರಾಲಂಬ ಚದುರಮುಹಂತೇಶ್ವರಗೆ ಜ್ಞಾನಶಕ್ತಿಯುರು ನೀವು ಹರಗೆ ||೩||

೧೪೧

ಮಂಗಲಂ ಸದಾ ತುಂಗ ಮುರುಘೇಂದ್ರ ಮಂಗಲಂ ಸದಾ ||ಪಲ್ಲ|| ಯತಿಕುಲಾಗ್ರಗಣ್ಯ ನುತಿವರೇಣ್ಯ ಪುಣ್ಯ | ಸತತಲೋಕ ಪೂಜ್ಯ ವಿತತ ಕೀರ್ತಿಖ್ಯಾತ ||೧|| ಸಾರಕಂಜರೂಪ ಮಾರಗರ್ವ ಲೋಪ ! ಧೀರಭಕ್ತ ಪೋಷ ಸಾರಮುಕ್ತಿ ಕೋಶಾ ||೨|| ಕರುಣಾಲವಾಲ ಚರಣವಿಶಾಲ | ಮರಣವಿದೂರ ಶರಣವಿಹಾರ ||೩||

೧೪೨

ಜಯಲಿಂಗಾ ಜಯಲಿಂಗಾ | ಜಯಮಂಗಲ ಚಿಲ್ಲಿಂಗಾ | ಜಯಪರತರ ಶಿವಲಿಂಗಾ ||ಪಲ್ಲ|| ಕರದೀ ಪಾಲಿಪ ಲಿಂಗಾ| ಪರಬಿಂದು ಪ್ರಣಿಲಿಂಗ| ಸುರಚಿರಶಿವ ರುಚಿಲಿಂಗಾ ||೧|| ಭೂವನ ಮಾಯ ಪತಿಲಿಂಗಾ | ಭಾಪಕ ಮುದ್ಗುರುಲಿಂಗಾ | ಭಾವಕ ನಭ ಮಹಲಿಂಗಾ ||೨|| ಶಿವಯೋಗಿಷ್ಟದ ಲಿಂಗಾ | ಶಿವಹೃದಯಾ ಪ್ರಭುಲಿಂಗಾ | ಶಿವಯೋಗಾಲಯಲಿಂಗಾ ||೩||

೧೪೩

ಶಿವ ಶಿವ ಶಿವ ಶಿವ ಮಂಗಲಂ ದೇಹಿ | ಭವಹರ ಸ್ಮರಹರ ಪುರಹರ ಪಾಹಿ ||ಪಲ್ಲ|| ಭವ ಭಯದೊಳು ವೆನ್ನ ಬಿರಿಸಿದಿ ಯಾಕೋ | ಭವಹರ ಸಾಕಿನ್ನು ದಯಮಾಡಬೇಕೋ ||೧|| ಕಷ್ಟದೇಹವ ನೆಚ್ಚಿ ಹುಟ್ಟಿತು ಜೀವಾ| ಅಷ್ಟಮದವ ನೆಚ್ಚಿ ಕೆಟ್ಟೆನೊ ದೇವಾ ||೨|| ಮಾನಪಮಾನಕೆ ನೀನೆ ದಯಾಳೋ | ದಯಮಾಡೊ ಗುರುಸಿದ್ಧ ನೀನೆ ಕೃಪಾಳೊ ||೩||

೧೪೪

ಅವತಾರ ಪ್ರಭುವೆಂದೆನಿಸಿದ ಬಸವಗೆ ಎತ್ತುವೆನಾರತಿಯಾ | ದೇವಾ ಬೆಳಗುವೆನಾರತಿಯಾ ||ಪಲ್ಲ|| ಬಾಗೇವಾಡಿಯೊಳು ಬೇಗನೆ ಜನಿಸಿ ಆಗಮ

ಬೋಧಿಸಿದಿ । ಬಸವಾ ಆಗಮ ಬೋಧಿಸಿದಿ ॥ ಯೋಗಾನಂದ ಶಿವಯೋಗ ಮಾರ್ಗದೊಳು ರಾಗವ ತೋರಿಸಿದಿ । ಬಸವಾ ರಾಗವ ತೋರಿಸಿದಿ ॥೧॥ ಭಕ್ತಿಭಾವಗುಣ ಯುಕ್ತಿ ಕಲ್ಯಾಣದಿ ಭಕ್ತರ ಬೋಧಿಸಿದಿ । ಬಸವಾ ಭಕ್ತರ ಬೋಧಿಸಿದಿ ॥ ಭಕ್ತಾನಂದ ಶಿವ ಭಕ್ತರ ಮಾಯೆಯೊಳ್ ಮುಕ್ತಿಯಂ ತಿಳಿಸಿದಿ । ಬಸವಾ ಮುಕ್ತಿಯಂ ತಿಳಿಸಿದಿ ॥೨॥ ಅಂಗಲಿಂಗದೊಳು ವೇರೆಯುವ ಕಪ್ಪಡಿ ಸಂಗಮನೆನಿಸಿದಿ । ಬಸವಾ ಸಂಗಮನೆನಿಸಿದಿ ॥ ಲಿಂಗಾನಂದಶಿವ ಜಂಗಮಯುತಪದ ಪುಂಗವನೆನಿಸಿದಿ । ಬಸವಾ ಪುಂಗವನೆನಿಸಿದಿ ॥೩॥

೧೪೫

ಜ್ಞಾನಪೂರ್ಣಂ ಜಗಜ್ಜ್ಯೋತಿ ನಿರ್ಮಲವಾದ ಮನವೇ ಕರ್ಪುರ ದಾರುತಿ ॥ಪಲ್ಲ॥ ಅನುದಿನ ಗುರುವಿನ ಅನುರಾಗ ಭಕ್ತಿಯಲಿ । ಜನನ ಮರಣ ರಹಿತ ಜಂಗಮಗೆ ಬೆಳಗಿರಿ ॥೧॥ ನಾನೀನೆಂಬುದ ಬೇಡಿರಿ ನರಕವ ಪ್ರಾಪ್ತಿ ಜ್ಞಾನಿಗಳೊಡನಾಡಿರಿ । ಹೀನಾಮಿಷಯ ಜನ್ಮ ಹಿಂದುಳಿಸಿ ಲಿಂಗಕ್ಕೆ ದೇವನೆ ಗತಿ ಎಂದು ಮನವಿತ್ತಿ ಬೆಳಗಿರಿ ॥೨॥ ಅಷ್ಟವರ್ಣದ ಸ್ಥೂಲವು ಮಾನವ ಜನ್ಮ ಹುಟ್ಟಿ ಬರುವದು ದುರ್ಲಭವು । ಕೊಟ್ಟಾನು ಗುರು ಎಮಗೆ ಮಾಡಿದ ಫಲದಿಂದ । ಹುಟ್ಟಿದ ಮಗನ್ಹೆಸರು ಶಿವನೆಂದು ಕರೆಯಿರಿ ॥೩॥

೧೪೬

ಶಿವಮಂಗಲವನು ಕೊಡುಬೇಗಾ । ಭವದುಃಖದಿ ಬಳಲುವೆವೀಗ ॥ ಭುವಿಗವತರಸಿದ ಕಾರಣವಾ। ಜವದೊಳು ಮೆರೆಯುತ ಗುರುದೇವ ।ಪಲ್ಲ। ಮನುಜ ಜನ್ಮವನು ತೊಟ್ಟಿಹೆವು ಘನಮುಹಿಮರ ಪಥ ಬಿಟ್ಟಿಹೆವು ॥ ಮನದಿ ಹೀನ ಗುಣ ತೊಡರಿಹೆವು । ಮುನಿವಂದನೆ ನಮಿಸುತ್ತಿಹೆವು ॥೧॥ ಹುಟ್ಟಿ ಹುಟ್ಟಿ ಸಾಯ್ವುದ ನೋಡಿ । ಕಷ್ಟತರದಿ ಬಹು ಚರಿಸಾಡಿ ॥ ದುಷ್ಟರೆನಿಸಿ ಕೊಂಬುದ ನೋಡಿ । ಶಿಷ್ಟನೆ ನೀನತಿ ದಯಮಾಡಿ॥೨॥ ಇದ್ದ ಗುಣಗಳೆಲ್ಲವ ಮರೆಸಿ । ಶುದ್ಧ ಮನದಿ ಮನವಂದಿರಸಿ ॥ ಸಿದ್ಧರಾಮಗುರು ದಯವೆರಸಿ । ತಿದ್ದುವೆ ನೀನತಿ ಮುದವೆರಸಿ ॥೩॥

೧೪೭

ಹರನಾಮವನು ಬಿಡದೆ ಜಪಿಸಿಬಲ್ಲವರುಭವ। ಮರಣವಾಯಾಕರ್ಮ ಮಲಪಾಶಬಂಧಬಹು। ದುರಿತಸಂಸಾರ ಸಂತಾಪಸಂಚಯನಳಿದು ವರಭೋಗ

ಮೋಕ್ಷವಹುದು|ಪ|ಶಿವ ಮಹಾದೇವ ಶಂಕರ ಶರ್ವ ಪಾರ್ವತೀ|ಧವ ನಂದಿ
ವಾಹ ದೇವೇಶಾನುದಕ್ಷಪಾ | ಸವನತಪದಾಂಭೋಜನಗಚಾಪ ನಿರ್ಮಲ
ನಿರಾತಂಕ ನೀಲಕಂಠ || ಭುವನೇಶ ವಿಜಯ ವೇದಾಂಗ ವೈಶ್ರವಣಸಖ |
ಪವಮಾನ ಪಂಚಮುಖ ಪಶುಪತಿ ಸಹಸ್ರಾಕ್ಷ | ಭವ ಭರ್ಗ ಭಸಿತಾಂಗ
ಭಾಳಲೋಚನ ಮೇರುಕಾರ್ಮುಕ ಕಪರ್ದಿಯೆಂದು ||೧|| ಸೋಮ ಶಾಂತಾ
ಭಯ ವಿರೂಪಾಕ್ಷ ವಿಶ್ವಾಭಿ | ರಾಮ ಗಂಭೀರ ಕಾಲಾರಿ ಕೂಟಸ್ಥ ವಿಭು |
ವಾಮದೇವಾಘೋರ ಪಂಚಾಕ್ಷರೋಂಕಾರ ತತ್ಪುರುಷ ರುದ್ರ ಭದ್ರ|| ಭೀಮ
ಸದ್ಯೋಜಾತ ವೃಷಮಹಾಕಾಲಜಿತ ಕಾಮಮೃತ್ಯುಂಜಯ ಪುರಾತನಪರಾ
ತ್ಪರನಿ| ರಾಮಯಾನಂತತೇಜೋರಾಶಿಸರ್ವಜ್ಞ ಶಾಶ್ವತಕಪಾಲಿಯೆಂದು||೨||
ಶೂಲಿ ಸುಜನೈಕಬಾಂಧವ ಸದಾಶಿವ ಚಂದ್ರ | ಮೌಳಿ ಮುನಿಮೋಗ್ರ
ಚರ್ಮಾಂಬರಾಸುರಶಿರೋ | ಮಾಲಿ ಮಂದಾಕಿನೀಧರ ಮಹೇಶ್ವರ ಮೇಘ
ವಾಹ ಮಂದರನಿವಾಸ || ನೀಲಲೋಹಿತ ಪಾರಿಜಾತಪಾವನ ಲೋಕ |
ಪಾಲ ಕೈಲಾಸಮಂದಿರ ಮಂತ್ರಮಯ ಭಕ್ತ||ಲೋಲ ಪಂಚಬ್ರಹ್ಮಪರನಾದ
ಬಿಂದುಮಯ ಪರಮಾತ್ಮಪುರವೈರಿಯೆಂದು||೩|| ವರದ ವಾಗೀಶ ವರ್ಣಾತೀತ
ವಂದ್ಯಜಯ | ಪರಮ ಪರತರ ಪರಂಜ್ಯೋತಿ ಪರಮಾನಂದ | ನಿರಪಾಯ
ನಿರುಪಮ ನಿರಾವರಣನಿರ್ಲೇಪನಿರವಯವ ನಿತ್ಯತೃಪ್ತ|| ಉರಗಕಂಕಣ ವಿಶ್ವ
ತೋಬಾಹು ವಿಶ್ವಾತ್ಮ |ಸುರಗಣಾರ್ಚಿತ ಸನಾತನ ಸದಾಗತಿಹಂಸ| ಗಿರೀಶ
ಗಾಂಗೇಯ ಪಿತ ಗಣನಾಥ ಜಗದೀಶ ವಿಷಧರ ಪಿನಾಕಿಯೆಂದು ||೪|| ಉದ
ಯಾಸ್ತಮಾನದೊಳು ನೂರೆಂಟುನಾಮವನು | ಪದಳುದಿಂದೋದಿಕೇಳಿದ
ವರ್ಗೆಶಂಭುಲಿಂ| ಗದ ಕರುಣದಿಂದಿನಿತು ಕೊರತೆಯಿಲ್ಲದೆ ಸಕಲಸಂಪದದೊ
ಳೊಂದುಗೂಡಿ || ಸದಮಳಜ್ಞಾನ ಸದ್ಭಕ್ತಿಗಳು ಮೇಳೈಸೆ ಒದಗಿ ಕೈ
ಸಾರುತಿಹವಿಹದಲ್ಲಿ ಪರದೊಳೊಂ | ದಿದಗಣಪದವನೈದಿ ನಿಜಸುಖದೊಳಿಹ
ಮುಕುತಿ ದೊರೆವುದಿದು ಸತ್ಯವೆಂದು ||೫||

೧೪೮

ಪರಮೇಶ್ವರಿಯಪುಣ್ಯನಾಮವನು ಪಗಲಿರುಳು | ಸರಸಾನುರಾಗದಿಂ
ದೋದಿ ಕೇಳಿದವರ್ಗೆ|ದುರಿತಕಂಟಕವಳಿದು ಕೈಸಾರುತಿಹವಮಳತರಭೋಗ
ಮೋಕ್ಷಂಗಳು||ಪ|| ಹ್ರೀಂಕಾರಿ ವಾಣಿ ಕಲ್ಯಾಣಿ ರುದ್ರಾಣಿ ರಮೆ|ಓಂಕಾರರೂ

…ಸ್ಪ್ರೀತೆ । ಐಂಕಿಲಾಮಾಲಿನಿ ಮಹಾಮಾಯೆ ಮಾತಂಗಿ
ಕ್ಲೀಂಕಲೇವರೆವರೇಣ್ಯೆ ॥ ಸೌಂಕಾರಸದನೆ ಶರ್ವಾಣಿ ಶಾರದೆ ಸತ್ಯೆ। ಕ್ರೋಂಕ
ವಚ ಮುಖ್ಯೆ ಮಂತ್ರಾದಿದೇವತೆ ದೇವಿ। ಶ್ರೀಂಕಿಲಾಕಾರಿ ವಿದಾಂಗಿಮಾತೃಕೆ
ಮಾನ್ಯೆಶಾಂಕರೀಶಾನಿಯೆಂದು ॥೧॥ ಗಿರಿಜೆ ಗೀರ್ವಾಣಪೂಜಿತೆ ಗೌರಿಗುಹಜನನಿ
ಪರನಾದಬಿಂದುಮಂದಿರೆ ಮನೋಂಬುಜಹಂಸೆ। ವರದೆ ವೈಭವೇ ನಿತ್ಯಮುಕ್ತೆ
ನಿರ್ಮಲೆ ನಿರಾವರಣೆ ಶಿವ ಶಾಂತೆ ಕಾಂತೆ ॥ ಧರಣಿಧರವರ್ಣನುಗತೆ ಸಾವಿತ್ರಿ
ಗಾಯತ್ರಿ। ವಿರಜೆ ವಿಶ್ವಾತ್ಮಕೆ ವಿಧೂತಪಾಪವ್ರಾತೆ ಶರಣಪ್ರಿತೆ ಸರ್ವಮಂಗಳೆ
ಸಚ್ಚಿದಾನಂದೆ ಪರೆ ಸುಧಾಕಾರಿಯೆಂದು ॥೨॥ ಚಂಡೆಚಂಡೇಶ್ವರಿ ಚತುರೆ
ಕಾಳಿಕೌಮಾರಿ । ಕುಂಡಲೆ ಕುಟಿಲೆ ಬಾಲೆ ಭೈರವಿ ಭವಾನಿ ಚಾ । ಮುಂಡಿ
ಮೂಲಾಧಾರೆ ಮನುವಂದ್ಯೆಮುನಿಪೂಜ್ಯೆಪಿಂಡಾಂಡಮಯೆ ಚುಟಕೆ।ಮಂಡ
ಲತ್ರಯನಿಳಯೆ ದಂಡಿ ಜಯದುರ್ಗೆ ಫಣಿ।ಕುಂಡಲೆ ಮಹೇಶ್ವರಿ ಮನೋನ್ಮನಿ
ಜಗನ್ಮಾತೆ।ಖಂಡಶಶಿಮಂಡನೆ ಮೃಡಾಣಿಪಾರ್ವತಿಪರಮಚುಡಕರಮೂರ್ತಿ
ಯೆಂದು ॥೩॥ ವಿಮಲೆ ವಿಖ್ಯಾತೆ ಮಧುಮತೆ ಮುಖ್ಯೆ ಮಹನೀಯೆ। ಸುಮತಿ
ಸುಲಲಿತೆ ಹೈಮವತಿ ಭಾವೆ ಭೋಗಾರ್ಥಿ। ಕಮಲೆಕಾತ್ಯಾಯನಿ ಕರಾಳೆತ್ರಿಪುರ
ವಿಜಯೇ ದಮೆ ದಯಾರಸಪೂರಿತೆ॥ ಅಮೃತೆಯಂಬಿಕೆಯನ್ನ ಪೂರ್ಣೆಯಶ್ವಾ
ರೂಢೆ। ಶಮೆ ಶುದ್ಧೆ ಸಿಂಹಾವಾಹಿನಿ ಶುಭಕಲಾಪೆಸು । ಪ್ರಮದೆಪಾವನೆಪದ್ಮೆ
ಪಾಶದೆ ಪರಬ್ರಹ್ಮಿಯುಮೆ ಸಹಜಸುಮುಖಿಯೆಂದು ॥೪॥ ಇಂತು ಗುರುಶಂಭು
ಲಿಂಗದ ಶಕ್ತಿ ಸೌಭಾಗ್ಯಸಂತತಶರೀರ ಸಮಜ್ಞಾನಸತ್ಕ್ರಿಯೆಸ । ಮಂತ್ರು ಕರು
ಣಾಸನಾಭರಣಾಯುಧಾದಿ ಸಗುಣಾಂತರಾದಿಗಳಾಗುತ ॥ ಸಂತಸಮನೀವ
ಶಾಂಭವಿಯ ನೂರೆಂಟು ಶುಭ।ವಾಂತ ನಾಮಂಗಳನುಜಪಿಸಿದೊಡೆಸತಿಪುತ್ರ।
ಸಂತಾನ ಸಕಲಸಂಪದಸಿದ್ಧಿಯಪ್ಪುದೋರಂತೆ ನಿಶ್ಚಯವಿದೆಂದು ॥

—ಈಶ ಈಶ ಧೀಶ ಪಾಲಿಸೊ, ಆಶಪಾಶ ನಾಶಗೊಳಿಸೊ—

॥ ಈಶ ಮುರುಘೇಶಾ ॥

# ಶ್ರೀ ಬಾಲಲೀಲಾ ಮಹಂತ ಶಿವಯೋಗೀಶ್ವರ ಗ್ರಂಥಮಾಲೆ

ಸಿದ್ಧವಾಗಿರುವ ಪ್ರಕಟನೆಗಳು :

ಬಾಲಲೀಲಾ ಮಹಂತಲಿಂಗ ಶಿವಯೋಗಿ ವಿರಚಿತ

೧ ಕೈವಲ್ಯದರ್ಪಣ

ಶ್ರೀ ಷಣ್ಮುಖಸ್ವಾಮಿ ಕೃತ

೨ ಅಖಂಡೇಶ್ವರ ವಚನ

ಶ್ರೀ ಘನಮಠ ಶಿವಯೋಗಿ ವಿರಚಿತ

೩ ಭಕ್ತಿಸುಧಾಸಾರ

೪ ಶ್ರೀ ಮೈಲಾರ ಬಸವಲಿಂಗಶರಣರ ಕೃತಿಗಳು

ಶ್ರೀ ಚನ್ನಕವಿ ವಿರಚಿತ

೫ ಬಾಲಲೀಲಾ ಮಹಂತ ಶಿವಯೋಗೀಶ್ವರ ಪುರಾಣ

ಗುಬ್ಬಿ ಮಲ್ಲಣಾರ್ಯಕೃತ

೬ ಗಣಭಾಷ್ಯ ರತ್ನಮಾಲಾ

ಶ್ರೀ ನಂಜೇಶ್ವರ ವಿರಚಿತ

೭ ಗುರುರಾಜ ಚಾರಿತ್ರ

೮ ಭಕ್ತಿ ಗೀತೆಗಳು